೩೨೬

# ಗಂಗಾದೇವಿಯ ಮಧುರಾವಿಜಯ

ಡಾ. ಡಿ. ಎನ್. ಶಾನಭಾಗ

೧೯೮೪

ಉಪನ್ಯಾಸ ಗ್ರಂಥಮಾಲೆ

೩೨೬

# ಗಂಗಾದೇವಿಯ ಮಧುರಾವಿಜಯ

ಡಾ. ಡಿ. ಎನ್. ಶಾನಭಾಗ

ಎಮ್. ಎ., ಪಿ. ಎಚ್ ಡಿ. ಸಾಹಿತ್ಯರತ್ನ (ಹಿಂದಿ)



ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೮೪

ಪ್ರಕಾಶಕರು :

**ಎಸ್. ಬಿ. ನಾಯಕ**

ಕಾರ್ಯನಿರ್ವಾಹಕ ನಿರ್ದೇಶಕರು, ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩

ಪ್ರಥಮ ಮುದ್ರಣ : ಮಾರ್ಚ, ೧೯೮೪

೫,೦೦೦ ಪ್ರತಿಗಳು



ಬೆಲೆ : ೫೦ ಪೈಸೆ

ಮುದ್ರಕರು :

**ಹೆಚ್. ಗಂಗಯ್ಯ**

ನಿರ್ದೇಶಕರು,

ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ

ಧಾರವಾಡ–೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ. ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನೀರಿಕ್ಷೆಗೆ ಮೀರಿದ ಮೆಚ್ಚಿಕೆಯೂ. ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ

ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೨೫ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರ ಬಂದೊಡನೆ ಅವುಗಳ ಸಾವಿ ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕ ಗಳು ನಾಲ್ಕು ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತ ಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿ ಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ–೫೮೦೦೦೩

**ಡಿ. ಎಂ. ನಂಜುಂಡಪ್ಪ**
ಕುಲಪತಿಗಳು

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಾಂಗವು ಕಳೆದ ಮಾರ್ಚ ತಿಂಗಳ ೧೫-೧೬ ರಂದು ಬೀದರ ಜಿಲ್ಲೆಯ ಗೊರ್ಟಾದಲ್ಲಿ ವ್ಯಾಸಂಗ ವಿಸ್ತರಣ ಉಪನ್ಯಾಸ ಶಿಬಿರವನ್ನು ಏರ್ಪಡಿಸಿತ್ತು. ಮತ್ತು ದಿನಾಂಕ ೧೬ ರಂದು 'ಗಂಗಾದೇವಿಯ ಮಧುರಾವಿಜಯ' ವನ್ನು ಕುರಿತು ಉಪನ್ಯಾಸ ನೀಡಲು ನನ್ನನ್ನು ಆಮಂತ್ರಿಸಿತ್ತು. ಆ ಉಪನ್ಯಾಸವೇ ಈಗ ಚಿಕ್ಕ ಹೊತ್ತಿಗೆಯ ರೂಪದಲ್ಲಿ ಪ್ರಕಟ ವಾಗುತ್ತಿದೆ. ನನಗೆ ಆಮಂತ್ರಣವಿತ್ತ ಅಧಿಕಾರಿಗಳಿಗೆ ನಾನು ಕೃತಜ್ಞನಾಗಿದ್ದೇನೆ. ಹಾಗೆಯೇ ನಮ್ಮನ್ನು ಆತ್ಮೀಯತೆಯಿಂದ ಸ್ವಾಗತಿಸಿ ಸತ್ಕರಿಸಿದ ಗೊರ್ಟಾ ಗ್ರಾಮಸ್ಥರಿಗೂ ಅವರನ್ನೆಲ್ಲ ಸನ್ಮಾರ್ಗದಲ್ಲಿ ನಡೆಸುತ್ತಿರುವ ವೇ| ಶ್ರೀ। ಅಡವೀರಸ್ವಾಮಿಗಳ ವರಿಗೂ ನನ್ನ ಕೃತಜ್ಞತೆಗಳು.

ಧಾರವಾಡ
೧೦-೯-೧೯೭೯

ದ. ನ. ಶಾನಭಾಗ

# ಪರಿವಿಡಿ

# ಕವಯಿತ್ರಿಯನ್ನು ಕುರಿತು

ಸಂಸ್ಕೃತಸಾಹಿತ್ಯದಲ್ಲಿ ಕವಿಗಳಂತೆ ಕವಯಿತ್ರಿಯರೂ ಪ್ರಸಿದ್ಧರಾಗಿದ್ದಾರೆ. ಆದರೆ ನಮ್ಮ ದುರ್ದೈವದಿಂದ ಎಲ್ಲ ಕವಯಿತ್ರಿಯರ ಕೃತಿಗಳು ಇಂದು ದೊರೆಯುತ್ತಿಲ್ಲ. ಶೀಲಾಭಟ್ಟಾರಿಕಾ, ಗೌರಿ, ಪದ್ಮಾವತಿ, ಭಾವದೇವಿ, ಇಂದು-ಲೇಖಾ, ತ್ರಿಭುವನಸರಸ್ವತಿ, ವಿದ್ಯಾವತಿ, ಸುಭದ್ರಾ ಮೊದಲಾದ ೩೨ ಕವಯಿತ್ರಿಯರ ಬಿಡಿಪದ್ಯಗಳು ದೊರೆತಿವೆ. ಕೇವಲ ನಾಲ್ಕು ಮಂದಿ ಕವಯಿತ್ರಿಯರ ಕೃತಿಗಳು ಸುಮಾರಾಗಿ ಪೂರ್ಣ ರೂಪದಲ್ಲಿ ದೊರೆತಿವೆ. ಮತ್ತು ಇವರೆಲ್ಲರೂ ಕರ್ನಾಟಕದವರೆಂಬುದು ನಮಗೆ ಅಭಿಮಾನದ ವಿಷಯವಾಗಿದೆ. ಇವರಲ್ಲಿ ಮೊದಲನೆಯವಳು 'ಕೌಮುದೀ-ಮಹೋತ್ಸವ'ವೆಂಬ ಐದಂಕಗಳ ಚಿಕ್ಕ ನಾಟಕ ಬರೆದ ವಿಜ್ಜಿಕೆ ಅಥವಾ ವಿಜಯಾಂಬಿಕೆ. ಎರಡನೆಯವಳು ನಮ್ಮ ಇಂದಿನ ಉಪನ್ಯಾಸದ ವಿಷಯವಾದ 'ಮಧುರಾವಿಜಯ' ಮಹಾಕಾವ್ಯವನ್ನು ಬರೆದ ಗಂಗಾದೇವಿ. ಮೂರನೆಯವಳು 'ವರದಾಂಬಿಕಾ ಪರಿಣಯ'ವೆಂಬ ಚಂಪೂಕಾವ್ಯವನ್ನು ರಚಿಸಿದ ತಿರುಮಲಾಂಬೆ ಮತ್ತು ನಾಲ್ಕನೆಯವಳು 'ರಘುನಾಥಾಭ್ಯುದಯ'ವೆಂಬ ಐತಿಹಾಸಿಕ ಕಾವ್ಯವನ್ನು ನಿರ್ಮಿಸಿದ ರಾಮಭದ್ರಾಂಬೆ.

ಸಂಸ್ಕೃತ ಸಾಹಿತ್ಯವನ್ನು ಸಮೃದ್ಧಗೊಳಿಸಿದ ಕನ್ನಡಿಗರಲ್ಲಿ ಗಂಗಾದೇವಿಯ ಹೆಸರು ಸುಪ್ರಸಿದ್ಧ. ಅವಳ 'ಮಧುರಾವಿಜಯಂ' ಅಥವಾ 'ವೀರಕಂಪರಾಯಚರಿತಂ' ಎಂಬ ಮಹಾಕಾವ್ಯವು ತತ್ಕಾಲೀನ ಇತಿಹಾಸವನ್ನು ಒಳಗೊಂಡು ತನ್ನ ಮಹತ್ವವನ್ನು ಹೆಚ್ಚಿಸಿಕೊಂಡಿದೆ. ಈ ಕೃತಿಯು ಕಾವ್ಯ

ಗುಣಗಳಿಂದ ತುಂಬಿರುವಂತೆ ಐತಿಹಾಸಿಕ ಘಟನೆಗಳನ್ನು ಕಂಡ ಪ್ರತ್ಯಕ್ಷದರ್ಶಿಯ ವರದಿಯನ್ನೂ ಒಳಗೊಂಡಿದೆ. ಆದುದರಿಂದ 'ಮಧುರಾವಿಜಯ'ವು ಐತಿಹಾಸಿಕ ಕಾವ್ಯವೆಂದೂ ಖ್ಯಾತಿ ಗಳಿಸಿದೆ. ಗಂಗಾದೇವಿಯು ವಿಜಯನಗರದ ರಾಜನಾಗಿದ್ದ ಬುಕ್ಕರಾಯನ ಸೊಸೆ; ವೀರಕಂಪಣರಾಯನ ಒಲವಿನ ರಾಣಿ. ಕಂಪಣನು ತಾರುಣ್ಯಾವಸ್ಥೆಯನ್ನು ತಳೆದು ದಿಗ್ವಿಜಯದ ಯೋಗ್ಯತೆ ಪಡೆದುದನ್ನು ಗಮನಿಸಿದ ಬುಕ್ಕರಾಯನು ಕಂಪಣನ ಪರಾಕ್ರಮಕ್ಕೆ ತಕ್ಕಂತಹ ರಾಜಕಾರ್ಯವನ್ನು ಅವನಿಗೆ ಒಪ್ಪಿಸುತ್ತಾನೆ.

ಆಗಿನ ಕಾಲದಲ್ಲಿ ದಕ್ಷಿಣಭಾರತವು ಮುಸಲ್ಮಾನ ಸುಲ್ತಾನರ ಆಕ್ರಮಣಕ್ಕೆ ತುತ್ತಾಗಿತ್ತು. ಅವರ ಹಾವಳಿಯಿಂದ ಪ್ರಜೆಗಳಲ್ಲಿ ಹಾಹಾಕಾರ ಮೂಡಿತ್ತು. ಪ್ರಜಾಪೀಡಕ ಮುಸಲ್ಮಾನ ಸುಲ್ತಾನನನ್ನು ನಾಶಮಾಡಿ ಪ್ರಜೆಗಳನ್ನು ಕಾಪಾಡಿ ಸಲಹಬೇಕೆಂಬ ಆದೇಶವನ್ನು ನೀಡಿ ಬುಕ್ಕರಾಯನು ಮಗನಾದ ಕಂಪಣನನ್ನು ಸೈನ್ಯಸಮೇತ ದಕ್ಷಿಣಕ್ಕೆ ಕಳುಹಿಸುತ್ತಾನೆ. ಈ ದಂಡಯಾತ್ರೆಯಲ್ಲಿ ಕಂಪಣನೊಡನೆ ಗಂಗಾದೇವಿಯೂ ಹೋಗುತ್ತಾಳೆ. ಹೀಗಾಗಿ ದಂಡಯಾತ್ರೆ, ಆಕ್ರಮಣ, ಯುದ್ಧ ಮೊದಲಾದವುಗಳನ್ನು ಪ್ರತ್ಯಕ್ಷ ಕಾಣುವ ಸದವಕಾಶ ಅವಳಿಗೆ ಲಭಿಸುತ್ತದೆ ಮತ್ತು 'ಮಧುರಾವಿಜಯ'ದಲ್ಲಿ ಅವಳು ತಾನು ಕಣ್ಣಾರೆ ಕಂಡ ದೃಶ್ಯಗಳನ್ನು ಕವಯಿತ್ರಿಯಾಗಿ ಬಣ್ಣಿಸಿದ್ದಾಳೆ. ಆದರೆ ನಮ್ಮ ದುರ್ದೈವವೆಂದರೆ ಇಷ್ಟು ಮಹತ್ವದ ಕೃತಿಯಾದ 'ಮಧುರಾವಿಜಯ'ದ ಸಂಪೂರ್ಣ ಹಸ್ತಪ್ರತಿಯು ನಮಗಿನ್ನೂ ಸಿಕ್ಕಿಲ್ಲ. ಈಗ ದೊರೆತ ಹಸ್ತಪ್ರತಿಯಲ್ಲಿ ಈ ಮಹಾಕಾವ್ಯದ ಅನೇಕ ಭಾಗಗಳು ನಾಶ

ವಾಗಿವೆ. ಈ ಮಹಾಕಾವ್ಯದಲ್ಲಿ ಎಷ್ಟು ಸರ್ಗಗಳಿದ್ದವೆಂಬುದು ಸಹ ತಿಳಿಯುವದಿಲ್ಲ. ಮೊದಲಿನ ಐದು ಸರ್ಗಗಳು ಪ್ರಾಯಶಃ ಸಂಪೂರ್ಣವಾಗಿವೆಯೆನ್ನಬಹುದು. ಆರು, ಏಳು ಮತ್ತು ಎಂಟನೆಯ ಸರ್ಗಗಳ ಅಧಿಕಾಂಶ ಉಪಲಬ್ಧವಿಲ್ಲ. ಆ ಬಳಿಕ ಸುಮಾರು ೪೨ ಶ್ಲೋಕಗಳು ಸಿಕ್ಕಿವೆ ಮತ್ತು ಇವು ಕೊನೆಯ ಸರ್ಗದ ಶ್ಲೋಕಗಳಾಗಿವೆ. ಆದರೆ ಕೊನೆಯ ಶ್ಲೋಕವು ಅಪೂರ್ಣವಾಗಿ ದೊರೆತಿದೆ. ಹೀಗಾಗಿ ಕಾವ್ಯದ ಅಂತ್ಯದ ಬಗೆಗೆ ಏನೂ ಹೇಳಬರುವಂತಿಲ್ಲ.

ಒಂದು ಸ್ವಾರಸ್ಯಕರ ಸಂಗತಿಯೆಂದರೆ ಮೂರನೆಯ ಸರ್ಗದಲ್ಲಿ ಕಂಪಣರಾಯನ ಮೆಚ್ಚಿನ ಮಡದಿಯ ವರ್ಣನೆ ೧೮ನೆಯ ಶ್ಲೋಕದಲ್ಲಿ ಬಂದಿದೆ. ಆದರೆ ಆ ಶ್ಲೋಕದಲ್ಲಿ ಗಂಗಾದೇವಿಯ ಉಲ್ಲೇಖವಿದ್ದಿರಬೇಕೆಂದು ಊಹಿಸುವ ಭಾಗವೇ ಅಳಿಸಿಹೋಗಿದೆ. ಹೀಗಾಗಿ ಅವಳು ತನ್ನ ಬಗೆಗೆ ಏನು ಹೇಳಿಕೊಂಡಿದ್ದಿರಬಹುದೆಂದು ಅರಿಯಲು ಸಾಧ್ಯವಿಲ್ಲ ವಾಗಿದೆ. ಆದರೆ ಆ ಶ್ಲೋಕದ ದೊರೆತ ಭಾಗಗಳಿಂದ ಅವಳು ಕಂಪಣನಿಗೆ ಎಂತಹ ರಾಣಿಯಾಗಿದ್ದಳು ಎಂಬುದನ್ನು ಊಹಿಸಬಹುದಾಗಿದೆ. ಈಗ ದೊರೆತ ಭಾಗ ಇಷ್ಟೇ—"ಶಚೀವ ಶಕ್ರಸ್ಯ ರಮೇವ ಶಾಙ್ರ್ಗಿಣಃ ಸತೀವ ಶಂಭೋ... ಮುಂದಿನ ಭಾಗ ಅಳಿಸಿ ಹೋಗಿದೆ. ಅವಳು ಇಂದ್ರನಿಗೆ ಶಚಿಯಿದ್ದಂತೆ, ವಿಷ್ಣುವಿಗೆ ಲಕ್ಷ್ಮಿ ಇದ್ದಂತೆ, ಶಿವನಿಗೆ ಪಾರ್ವತಿಯಿದ್ದಂತೆ (ಪ್ರೀತಿಯ ಮಡದಿಯಾಗಿದ್ದಳು). ಮೇಲಾಗಿ ಈ ಮಹಾ ಕಾವ್ಯದಲ್ಲಿ ಎಲ್ಲಿಯೂ ಗಂಗಾದೇವಿಯ ತಾಯಿ—ತಂದೆಯರ ಅಥವಾ ಕುಲ—ಗೋತ್ರಗಳ ಉಲ್ಲೇಖವಿಲ್ಲ. ಬಹುಶಃ ಅವಳು ಸಾಮಾನ್ಯ ಮನೆತನದಲ್ಲಿ ಹುಟ್ಟಿದ್ದಿರಬೇಕು. ಜನ್ಮನಾಮ

'ಗಂಗಾ' ಎಂದಿದ್ದು, ಕಂಪಣರಾಯನನ್ನು ವರಿಸಿದ ಬಳಿಕ 'ಗಂಗಾದೇವಿ' ಆಗಿದ್ದಿರಬೇಕು. ಅವಳು ಅವನಿಗೆ ಒಲವಿನ 'ಗಂಗೆ'ಯಾಗಿದ್ದಳೆಂಬುದು ಏಳನೆಯ ಸರ್ಗದ ೩೯ನೆಯ ಶ್ಲೋಕದಿಂದ ತಿಳಿದು ಬರುತ್ತದೆ:–"ಅಥ ಕಂಪನೃಪೋಽಪಿ ಕೃತ್ಯವಿತ್ ಕೃತಸಂಧ್ಯಾಸಮಯೋಚಿತಕ್ರಿಯಃ। ಅವದತ್ ಸವಿಧೇ ಸ್ಥಿತಾಂ ಪ್ರಿಯಾಂ ಭುವಿ ಗಂಗೇತ್ಯಭಿನಂದಿತಾಹ್ವಯಾಮ್ ||" (ಆಗ ಸಂಧ್ಯಾಸಮಯದ ಯೋಗ್ಯವಿಧಿಗಳನ್ನು ಪೂರೈಸಿದ ಕಂಪರಾಯನು ಸಮೀಪದಲ್ಲಿದ್ದ ಮತ್ತು 'ಗಂಗಾ' ಎಂಬ ಶುಭನಾಮವುಳ್ಳ ಪ್ರೀತಿಯ ಮಡದಿಗೆ ಹೀಗೆಂದನು).

ಮಧುರೆಯ ಸುಲ್ತಾನನನ್ನು ನಾಶಪಡಿಸುವ ಮೊದಲು ಕಂಪಣನು ಕಂಚಿಯಲ್ಲಿ ಆಳುತ್ತಿದ್ದ ದುಷ್ಟನಾದ ಸಂಭವರಾಯನನ್ನೂ ಸೋಲಿಸುತ್ತಾನೆ. ಈ ಯುದ್ಧದ ವರ್ಣನೆಯೂ ಕಾವ್ಯದಲ್ಲಿ ಬಂದಿದೆ.

## ಕಥಾವಸ್ತುವನ್ನು ಕುರಿತು

'ಮಧುರಾವಿಜಯ'ವು ಗಣಪತಿಯ ಸ್ತುತಿಯಿಂದ ಪ್ರಾರಂಭವಾಗುತ್ತದೆ. ಶಿವ-ಪಾರ್ವತಿಯರನ್ನೂ ಸರಸ್ವತೀ ದೇವಿಯನ್ನೂ ವಂದಿಸಿ ಕವಯಿತ್ರಿಯು ತನ್ನ ಗುರುವಾದ ಕ್ರಿಯಾಶಕ್ತಿಗೆ ನಮಿಸುತ್ತಾಳೆ–

ಅಸಾಧಾರಣಸಾರ್ವಜ್ಞ್ಯಂ ವಿಲಸತ್ಸರ್ವಮಂಗಲಮ್।
ಕ್ರಿಯಾಶಕ್ತಿಗುರುಂ ವಂದೇ ತ್ರಿಲೋಚನಮಿವಾಪರಮ್||

(ಅಸಾಮಾನ್ಯವಿದ್ವಾಂಸನೂ ಸಕಲಮಂಗಲಕಾರಕ ಗುಣ ಗಳಿಂದ ಬೆಳಗುವವನೂ ಶಿವನ ಅಪರಾವತಾರನಂತಿರುವವನೂ ಆದ ಕ್ರಿಯಾಶಕ್ತಿಗುರುವಿಗೆ ವಂದಿಸುತ್ತೇನೆ.) ಅನಂತರ ಒಂದೊಂದು ಶ್ಲೋಕದಲ್ಲಿ ಒಬ್ಬೊಬ್ಬರಂತೆ ಹಿಂದಿನ ಮಹಾ ಕವಿಗಳಾದ ವಾಲ್ಮೀಕಿ, ವ್ಯಾಸ, ಕಾಲಿದಾಸ, ಬಾಣ, ಭಾರವಿ, ದಂಡಿ, ಭವಭೂತಿ, ಕರ್ಣಾಮೃತಕವಿ, ತಿಕ್ಕಯ, ಅಗಸ್ತ್ಯ, ಗಂಗಾಧರ, ಮತ್ತು ವಿಶ್ವನಾಥ ಇವರ ಗುಣವರ್ಣನೆಯಿದೆ. ಕಾಲಿದಾಸನನ್ನು ಹೀಗೆ ಹೊಗಳಲಾಗಿದೆ:–

ದಾಸತಾಂ ಕಾಲಿದಾಸಸ್ಯ ಕವಯಃ ಕೇ ನ ಬಿಭ್ರತಿ|
ಇದಾನೀಮಪಿ ತಸ್ಯಾರ್ಥಾನುಪಜೀವಂತ್ಯಮೀ ಯತಃ||

ಕವಿಗಳು ಈಗಲೂ ಕಾಲಿದಾಸನನ್ನು ಅನೇಕ ವಿಧದಲ್ಲಿ ಅವಲಂಬಿಸಿರುವದರಿಂದ ಅವರೆಲ್ಲ ಕಾಲಿದಾಸನ ದಾಸರು ಎಂಬುದು ಗಂಗಾದೇವಿಯ ಅಭಿಪ್ರಾಯ. ಮತ್ತು ಈ ಮಾತು ಅವಳಿಗೂ ಅನ್ವಯಿಸುತ್ತದೆ. ತನ್ನದು "ಸರಸೋದಾರಪದಾ ಸರಸ್ವತೀ" ಎಂದು ಅವಳು ೭–೪೧ರಲ್ಲಿ ಹೇಳಿಕೊಂಡಿದ್ದಾಳೆ. ಮತ್ತು ಇದನ್ನು ವಿದ್ವಾಂಸರು ಒಪ್ಪುತ್ತಾರೆ.

ಆ ಬಳಿಕ ಗಂಗಾದೇವಿಯು ಕವಿ–ಕಾವ್ಯಗಳನ್ನು ಕುರಿತು ತನ್ನ ಮತವನ್ನು ಪ್ರಕಟಿಸಿ ಬುಕ್ಕರಾಯನ ಗುಣ ವರ್ಣನೆಯಲ್ಲಿ ತೊಡಗುತ್ತಾಳೆ :

ಯಃ ಶೇಷ ಇವ ನಾಗಾನಾಂ ನಗಾನಾಂ ಹಿಮವಾನಿವ|
ದೈತ್ಯಾರಿರಿವ ದೇವಾನಾಂ ಪ್ರಥಮಃ ಪೃಥಿವೀ–
ಭುಜಾಮ್||

ತಿಗ್ಮಾಂಶೋರಪಿ ತೇಜಸ್ವೀ ಶೀತಾಂಶೋರಪಿ ಶೀತಲಃ|
ಸಾಗರಾದಪಿ ಗಂಭೀರಃ ಸುಮೇರೋರಪಿ ಯಃ ಸ್ಥಿರಃ||

ಎಂದು ಮುಂತಾಗಿ ಬುಕ್ಕರಾಯನ ವರ್ಣನೆಯಿಂದೆ. ನಾಗಗಳಲ್ಲಿ ಶೇಷನಂತೆ,ಪರ್ವತಗಳಲ್ಲಿ ಹಿಮಾಚಲದಂತೆ ಮತ್ತು ದೇವತೆಗಳಲ್ಲಿ ವಿಷ್ಣುವಿನಂತೆ ಅವನು ಅರಸರಲ್ಲಿ ಶ್ರೇಷ್ಠನಾಗಿದ್ದನು ಅವನು ಸೂರ್ಯನಿಗಿಂತ ಅಧಿಕ ತೇಜಸ್ವಿಯಾಗಿದ್ದನು; ಚಂದ್ರನಿಗಿಂತ ಹೆಚ್ಚು ಶೀತಲನಾಗಿದ್ದನು; ಸಮುದ್ರಕ್ಕಿಂತ ಹೆಚ್ಚು ಗಂಭೀರನಾಗಿದ್ದನು ಮತ್ತು ಸುಮೇರು ಪರ್ವತಕ್ಕಿಂತ ಅಧಿಕ ಸ್ಥಿರನಾಗಿದ್ದನು. ಅವನಿಗೆ ವಿವೇಕವೇ ಮಂತ್ರಿಯಾಗಿತ್ತು; ಬಿಲ್ಲೇ ಸೈನ್ಯವಾಗಿತ್ತು; ತೋಳುಗಳೇ ಸಮರಾಂಗಣದಲ್ಲಿ ಸಹಾಯಕಗಳಾಗಿದ್ದವು. ಅವನಲ್ಲಿ ಲಕ್ಷ್ಮಿಯು ಚಿರಸ್ಥಾಯಿಯಾಗುಳಿದು ಮಹಾವಿಷ್ಣುವನ್ನು ನೆನೆಯಲೇ ಇಲ್ಲ:-

ಲಕ್ಷ್ಮೀಶ್ಚಿರಾಜ್ಜಗದ್ರಕ್ಷಾಜಾಗರೂಕಮುಪೇತ್ಯ ಯಮ್|
ಯೋಗನಿದ್ರಾಜಡಂ ವಿಷ್ಣುಂ ಕದಾಚಿದಪಿ ನಾಸ್ಮರತ್||

ಆ ಬುಕ್ಕರಾಯನ ರಾಜಧಾನಿ 'ವಿಜಯಾ' ಎಂಬ ನಗರವು. ಅದನ್ನು ವಿದ್ವಾಂಸರು ಇಂದ್ರನ ಅಮರಾವತಿಗೆ ಹೋಲಿಸುತ್ತಿದ್ದರು. ಅದರ ಸುತ್ತಲೂ ತುಂಗಭದ್ರೆಯು ಹರಿಯುತ್ತಿದ್ದಳು. ಅದರ ಉಪನಗರವಾದ ಪಂಪಾಪಟ್ಟಣದಲ್ಲಿ ವಾಸಿಸುತ್ತಿದ್ದ ವಿರೂಪಾಕ್ಷದೇವನು ಅಲಕಾಪಟ್ಟಣವನ್ನು ಸ್ಮರಿಸಲಿಲ್ಲ ; ಅಷ್ಟೊಂದು ಸಂಪದ್ಭರಿತವಾಗಿತ್ತು ವಿಜಯನಗರವು! ಬುಕ್ಕರಾಯನ ಮಹಾರಾಣಿಯು 'ದೇವಾಯಿ' ಯು; ಅವಳಲ್ಲಿ ಹುಟ್ಟಿದ ಜ್ಯೇಷ್ಠಪುತ್ರನೇ 'ಮಧುರಾವಿಜಯ' ದ ಕಥಾನಾಯಕ ವೀರಕಂಪಣರಾಯನು.

ಕಂಪಣನು ಹೊಟ್ಟೆಯಲ್ಲಿದ್ದಾಗ ದೇವಾಯಿಗೆ ಮಣ್ಣು ತಿನ್ನುವ ಬಯಕೆಯಾಯಿತಂತೆ. ಅದರ ಇಂಗಿತವನ್ನು ಗಂಗಾದೇವಿಯು ಬಣ್ಣಿಸಿದ ರೀತಿಯು ಸ್ವಾರಸ್ಯಕರವಾಗಿದೆ:

ಗರ್ಭಸ್ಥಿತಸ್ಯೈವ ಶಿಶೋರ್ವಿಧಾತುಂ ವಸುಂಧರಾ-
ಮಂಡಲಭಾರಶಿಕ್ಷಾಮ್|
ಆರೋಚಯತ್ ಪಾರ್ಥಿವಧರ್ಮಪತ್ನೀ ಮನ್ಯೇ
ಮೃದಾಸ್ವಾದರಸಾನುಬಂಧಮ್||

ಭೂಮಿಯ ಭಾರವನ್ನು ಹೊರುವ ಶಿಕ್ಷಣವನ್ನು ಶಿಶುವಿಗೆ ಗರ್ಭದಲ್ಲಿರುವಾಗಲೇ ಕಲಿಸಲು ರಾಣಿಗೆ ಅಂತಹ ಬಯಕೆಯಾಯಿತಂತೆ. ಕಂಪಣನ ಜನ್ಮವಾದಾಗ ಬುಕ್ಕರಾಯನಿಗಾದ ಆನಂದ ಅಷ್ಟಿಷ್ಟಲ್ಲ. ಆ ಸಂತಸದ ಸುದ್ದಿ ತಂದವರಿಗೆ ಪಾರಿತೋಷಕವಾಗಿ ತನ್ನನ್ನೇ ಕೊಡುವ ಇಚ್ಛೆಯಾಯಿತಂತೆ ಅವನಿಗೆ! ಶಿಶುವನ್ನು ನೋಡಿದಾಗ ಆತನೊಬ್ಬನೇ ರಣರಂಗದಲ್ಲಿ ವೈರಿಗಳನ್ನು ನಡುಗಿಸತಕ್ಕವನೆಂದು ಬುಕ್ಕರಾಯನು ನಿರ್ಧರಿಸಿ ಅವನಿಗೆ 'ಕಂಪನ' ಎಂಬ ಅನ್ವರ್ಥಕ ಹೆಸರನ್ನು ಇಟ್ಟನಂತೆ:

ಆಕಂಪಯಿಷ್ಯತ್ಯಯಮೇಕವೀರಃ ಸಂಗ್ರಾಮರಂಗೇ
ಸಕಲಾನರಾತೀನ್|
ಇತ್ಯೇವ ನಿಶ್ಚಿತ್ಯ ಸ ದೀರ್ಘದರ್ಶೀ ನಾಮ್ನಾ ಸುತಂ
ಕಂಪನ ಇತ್ಯಕಾರ್ಷೀತ್||

ಬೆಳೆದು ದೊಡ್ಡವನಾದಂತೆ ಕಂಪಣನು ತಂದೆಯಿಂದ ಶಸ್ತ್ರಾಸ್ತ್ರ ವಿದ್ಯೆಯನ್ನು ಕಲಿತನು. ಅವನಲ್ಲಿ ಪಂಚಪಾಂಡವರ ವಿಶೇಷಗುಣಗಳು ಒಟ್ಟಿಗೆ ಸೇರಿದ್ದವು:

ಸ ಸತ್ಯವಾಗ್ ಭೂರಿಬಲೋ ಧನುರ್ಧರಸ್ತುರಂಗಮಾರೋಹಣ
ಕರ್ಮಮರ್ಮವಿತ್।
ಕೃಪಾಣವಿದ್ಯಾನಿಪುಣಃ ಪೃಥಾಭುವಾಮಮರ್ಶಿ ಸಂಘಾತ
ಇವೈಕತಾಂ ಗತಃ॥

ಕಂಪಣನು ಧರ್ಮರಾಜನಂತೆ ಸತ್ಯವಂತನಾಗಿದ್ದನು; ಭೀಮನಂತೆ ಶಕ್ತಿಸಂಪನ್ನನಾಗಿದ್ದನು; ಅರ್ಜುನನಂತೆ ಬಿಲ್ಲುಗಾರನು; ನಕುಲ-ಸಹದೇವರಂತೆ ಕುದುರೆಯೇರುವದರಲ್ಲಿ ಪಳಗಿದವನೂ ಖಡ್ಗವಿದ್ಯೆಯಲ್ಲಿ ನಿಪುಣನೂ ಆಗಿದ್ದನು. ಹೀಗೆ ಗುಣ-ಶೀಲ—ಪರಾಕ್ರಮಗಳನ್ನು ಪಡೆದ ಕುಮಾರ ಕಂಪಣನಿಗೆ ಬುಕ್ಕರಾಯನು ತಕ್ಕ ಉಪದೇಶ ನೀಡಿ ಒಂದು ಮಹತ್ವದ ರಾಜಕಾರ್ಯವನ್ನು ಒಪ್ಪಿಸುತ್ತಾನೆ. ಅದೆಂದರೆ ಕಂಚಿಯಲ್ಲಿ ಆಳುತ್ತಿದ್ದ ಸಂಭವರಾಯನನ್ನು ಸದೆಬಡಿದು, ಆ ಬಳಿಕ ಮಧುರೆಯಲ್ಲಿ ಪ್ರಜಾಪೀಡನೆಯಲ್ಲಿ ತೊಡಗಿದ ಮುಸಲ್ಮಾನ ಸುಲ್ತಾನನನ್ನು ನಾಶಪಡಿಸುವದು.

ತಂದೆಯ ಅಪ್ಪಣೆಯನ್ನು ಶಿರಸಾವಹಿಸಿ ಕಂಪಣನು ದಕ್ಷಿಣ ದಿಗ್ವಿಜಯ ಕೈಕೊಂಡು ಯಶಸ್ವಿಯಾದ ಘಟನೆಗಳು 'ಮಧುರಾವಿಜಯ'ದಲ್ಲಿ ವರ್ಣಿತವಾಗಿವೆ. ಈಗ ಈ ಕಥಾವಸ್ತುವನ್ನು ಸ್ವಲ್ಪ ವಿವರವಾಗಿ ನೋಡೋಣ. ಗಂಗಾದೇವಿಯ ಮಾತುಗಳನ್ನೇ ಅನುಸರಿಸಿ ಕನ್ನಡದಲ್ಲಿ ಕಥೆಯನ್ನು ಹೇಳಲು ಪ್ರಯತ್ನಿಸುತ್ತಿದ್ದೇನೆ.

# ಮೊದಲನೆಯ ಸರ್ಗ

**ದೇವತಾಸ್ತುತಿ :**

ಕಲ್ಯಾಣಾಯ ಸತಾಂ ಭೂಯಾತ್ ದೇವೋ
ದಂತಾವಲಾನನಃ ।
ಶರಣಾಗತಸಂಕಲ್ಪಕಲ್ಪನಾಕಲ್ಪಪಾದಪಃ ॥

"ಶರಣು ಬಂದವರ ಸಕಲಬಯಕೆಗಳನ್ನು ಕಲ್ಪವೃಕ್ಷದಂತೆ ಪೂರೈಸುವ ಗಜಮುಖನಾದ ಗಣಪತಿಯು ಸಜ್ಜನರಿಗೆ ಮಂಗಲವನ್ನುಂಟುಮಾಡಲಿ."

ಅರಿವನ್ನು ಪಡೆಯಲು, ಚೈತನ್ಯದಿಂದ ಬೆಳಗುವ ಮತ್ತು ಹೆಣ್ಣು-ಗಂಡುಗಳನ್ನು ನಿರ್ಮಿಸುವಲ್ಲಿ ಸೃಷ್ಟಿಕರ್ತನಿಗೆ ಮಾದರಿಗಳಾಗಿರುವ ಪಾರ್ವತೀ-ಪರಮೇಶ್ವರರ ಪಾದಕ್ಕೆ ನಾನು ಎರಗುತ್ತೇನೆ. ಮಹಾಕವಿಗಳ ಮುಖಾರವಿಂದದಲ್ಲಿ ನೆಲೆಸುವ ಮತ್ತು ಚೈತನ್ಯವೆಂಬ ಸಮುದ್ರವನ್ನು ಉಕ್ಕೇರಿಸುವ ಬೆಳದಿಂಗಳಂತಿರುವ ಸರಸ್ವತೀದೇವಿಗೆ ನಾನು ವಂದಿಸುತ್ತೇನೆ. ಅಸಾಧಾರಣ ಜ್ಞಾನವುಳ್ಳ, ಸಕಲಮಂಗಳಗಳಿಂದ ಬೆಳಗುವ ಮತ್ತು ಇನ್ನೊಬ್ಬ ಶಿವನಂತಿರುವ ಕ್ರಿಯಾಶಕ್ತಿಯೆಂಬ ನನ್ನ ಗುರುವಿಗೆ ನಮಸ್ಕರಿಸುತ್ತೇನೆ.

**ಪ್ರಖ್ಯಾತ ಕವಿಗಳ ಪ್ರಶಂಸೆ :**

ಜಗತ್ತಿನಲ್ಲಿ ಪದ್ಯನಿರ್ಮಾಣವಿದ್ಯೆಯ ಮೊದಲ ಹೆಜ್ಜೆಯ ಮಾದರಿಯಾಗಿರುವ ವಾಲ್ಮೀಕಿ ಮುನಿಗಳು ಸಜ್ಜನರ ಮನಸ್ಸನ್ನು ಪ್ರಸನ್ನಗೊಳಿಸಲಿ. ಕಬ್ಬಿನ ಪ್ರತಿಯೊಂದು ಗೆಣ್ಣಿನಲ್ಲಿಯೂ ಸಿಹಿರಸವಿರುವಂತೆ ವ್ಯಾಸರ ಮಹಾಭಾರತದ

ಪ್ರತಿಯೊಂದು ಪರ್ವದಲ್ಲಿಯೂ ಸಹೃದಯರಿಗೆ ಆಹ್ಲಾದ ವೀಯುವ ಸಾರವಿದೆ. ಕಾಲಿದಾಸನಿಗೆ ಗುಲಾಮರಾಗದ ಕವಿಗಳಿದ್ದಾರೆಯೆ? ಏಕೆಂದರೆ, ಇಂದಿಗೂ ಕವಿಗಳು ಅವ ನನ್ನೇ ಅನುಸರಿಸುತ್ತಾರೆ. ಸರಸ್ವತಿಯೇ ನುಡಿಸಿದ ವೀಣೆಯ ನಾದದಂತೆ ಮನೋಹಾರಿಯಾದ ಬಾಣಭಟ್ಟನ ನುಡಿಯನ್ನು ಇತರರು ಹೇಗೆ ಅರಿಯಬಲ್ಲರು? ಹಿಸುಕಿ ದಾಗಲೇ ಸುಗಂಧವೀಯುವ ಬಕುಲಪುಷ್ಪದ ಹಾರದಂತೆ ಭಾರವಿಯ ವಾಣಿಯು ಆಳವಾಗಿ ಅರಿತಾಗಲೇ ತನ್ನ ಸಾರವನ್ನು ಹೊರಸೂಸಿ ಪಂಡಿತರಿಗೆ ಆನಂದ ನೀಡುತ್ತದೆ. ಆಚಾರ್ಯ ದಂಡಿಯ ಮಾತಿನ ಸೊಬಗು ಅಮೃತಪಾನದಂತಿದೆ; ಅದು ಸರಸ್ವತಿಯ ಅಲಂಕಾರದ ಕನ್ನಡಿಯಂತೆ ಬೆಳಗುತ್ತದೆ. ವಿದ್ವಾಂಸರ ಕಿವಿಗೆ ಸಂತಸವೀಯುವ ಭವಭೂತಿಯ ನುಡಿ ಯಾವುದೋ ಕಾಮಧೇನುವಾಗಿರಬೇಕು. ಪಾರಿಜಾತದ ಹೂ ಗೊಂಚಲಿಂದ ಸುರಿಯುವ ಮಕರಂದದಂತೆ ಕರ್ಣಾಮೃತ ಕವಿಯ ಕಾವ್ಯ ಯಾರಿಗೆ ಆಹ್ಲಾದಕಾರಿಯಲ್ಲ? ಚಂದ್ರನ ಬೆಳದಿಂಗಳನ್ನು ಕುಡಿಯಲು ಚಕೋರಪಕ್ಷಿಗಳು ಹಾತೊರೆ ಯುವಂತೆ ತಿಕ್ಕಯ ಕವಿಯ ಸೂಕ್ತಿಗಳನ್ನು ಸವಿಯಲು ಕವಿಗಳು ಆಶೆಪಡುತ್ತಾರೆ. ಎಪ್ಪತ್ತಾಲ್ಕು ಕೃತಿಗಳನ್ನು ರಚಿಸಿದ ಅಗಸ್ತ್ಯನ ವಿದ್ವತ್ತೆಗೆ ಅಸೂಯೆ ಪಡದವರು ಇದ್ದಾರೆಯೆ? ಮಹಾಭಾರತದ ಕತೆಯನ್ನು ನಾಟಕರೂಪ ದಲ್ಲಿ ಪ್ರತ್ಯಕ್ಷೀಕರಿಸಿದ ಅಪರವ್ಯಾಸನಾದ ಗಂಗಾಧರ ಮಹಾ ಕವಿಯನ್ನು ಸ್ತುತಿಸುತ್ತೇನೆ. ತನ್ನ ಅನುಗ್ರಹದಿಂದ ನನ್ನಂಥವರಲ್ಲಿಯೂ ಸರ್ವಜ್ಞತ್ವವನ್ನು ಮೂಡಿಸಿರುವ ವಿಶ್ವನಾಥ ಕವೀಶ್ವರನು ಜಯಶಾಲಿಯಾಗಲಿ.

**ಕವಿ-ಕಾವ್ಯ-ವಿಮರ್ಶೆ :**

ಕೆಲವು ಕಾವ್ಯಕೃತಿಗಳಲ್ಲಿ ಅರ್ಥ, ಕೆಲವಲ್ಲಿ ಶಬ್ದ, ಕೆಲವಲ್ಲಿ ಭಾವ ಮತ್ತು ಇನ್ನು ಕೆಲವಲ್ಲಿ ರಸವಿರುತ್ತದೆ. ಇವೆಲ್ಲ ಕೂಡಿರುವ ಕೃತಿ ಮಾತ್ರ ದುರ್ಲಭ. ಚಂದನರಸವನ್ನು ಉಪ್ಪಿನಕಣವೊಂದು ಕೆಡಿಸುವಂತೆ ಪುಟ್ಟ ದೋಷವು ಕೂಡ ಪ್ರಬಂಧವನ್ನು ನಿಂದೆಗೆ ಗುರಿಪಡಿಸುತ್ತದೆ. ಪತಿವ್ರತೆಯಾಗಿದ್ದರೂ ರೂಪವಿಲ್ಲದ ಹೆಂಡತಿ ಗಂಡನಿಗೆ ಸೇರುವದಿಲ್ಲ; ಅದರಂತೆ, ದೋಷರಹಿತವಾಗಿದ್ದರೂ ಗುಣಗಳಿಲ್ಲದ ಕಾವ್ಯ ವಿದ್ವಾಂಸರನ್ನು ರಂಜಿಸಲಾರದು. ದುಷ್ಟನು ಕಾವ್ಯಗಳಲ್ಲಿ ಗುಣಗಳನ್ನು ಕಡೆಗಣಿಸಿ ದೋಷಗಳನ್ನೇ ಹುಡುಕುತ್ತಾನೆ; ಕಾಗೆಯು ಅಡವಿಯಲ್ಲಿ ಮಾವಿನಮರವನ್ನು ಬಿಟ್ಟು ಬೇವಿನ ಮರಕ್ಕೆ ಆಶಿಸುತ್ತದೆಯಲ್ಲವೆ? ದುಷ್ಟನು ಇತರರಿಂದ ಕದ್ದ ಕಾವ್ಯದ ಮೂಲಕ ಎಷ್ಟುದಿನ ಬಾಳಬಹುದು? ನಕಲೀ ರತ್ನದ ಹೊಳಪು ಅಲ್ಪಕಾಲವಷ್ಟೆ. ಈ ಜಗತ್ತಿನಲ್ಲಿ ತಾರ್ಕಿಕರೂ ವೈಯಾಕರಣಿಗಳೂ ಬಹಳ ಮಂದಿ ಇದ್ದಾರೆ. ಆದರೆ ತಮ್ಮ ಸರಸಕಾವ್ಯಗಳಿಂದ ಕಣ್ಸೆಳೆಯುವ ಕವಿಗಳು ಮಾತ್ರ ವಿರಳ. ಕವಿಯ ಕೃತಿಯು ಏನನ್ನು ಪೂರೈಸುವದಿಲ್ಲ? ಅದು ಕೀರ್ತಿ ಮತ್ತು ಸಂಪತ್ತುಗಳನ್ನು ತಂದೀಯುತ್ತದೆ; ಕೆಡಕನ್ನು ನಾಶಪಡಿಸುತ್ತದೆ ಮತ್ತು ಆಹ್ಲಾದವನ್ನು ಬೀರುತ್ತದೆ. ಸತ್ಕಾವ್ಯವನ್ನು ಕೇಳಲು ಸಹೃದಯನಾದ ರಸಿಕನಿಗೆ ಆಮಂತ್ರಣ ಬೇಡ; ಸುಮಧುರ ಹೂಗಳ ರಸ ಹೀರಲು ದುಂಬಿಯನ್ನು ಯಾರಾದರೂ ಕರೆಯುತ್ತಾರೆಯೆ? ಆದ್ದರಿಂದ, ಕಂಪ ಭೂಪತಿಯ ಚರಿತ್ರೆಯಾದ ಮಧುರಾ-

ವಿಜಯವೆಂಬ ನನ್ನ ಈ ಕಾವ್ಯವನ್ನು ವಿದ್ವಾಂಸರು ಲಾಲಿಸ ಬೇಕು.

**ಕಂಪಣನ ತಂದೆ ಬುಕ್ಕರಾಯನ ಹಿರಿಮೆ :**

ಹರಿಹರನ ತಮ್ಮನಾದ ಬುಕ್ಕರಾಯನೆಂಬ ನೃಪಾಲ ನಿದ್ದನು. ಅವನ ಆಜ್ಞೆಯನ್ನು ಸಕಲ ಸಾಮಂತರಾಜರು ಶಿರಸಾವಹಿಸಿ ಪಾಲಿಸುತ್ತಿದ್ದರು. ಸರ್ಪಗಳಲ್ಲಿ ಶೇಷ, ಪರ್ವತ ಗಳಲ್ಲಿ ಹಿಮವಂತ ಮತ್ತು ದೇವತೆಗಳಲ್ಲಿ ವಿಷ್ಣು ಇರುವಂತೆ ಅವನು ಸಕಲರಾಜರಲ್ಲಿ ಅಗ್ರಗಣ್ಯನಾಗಿದ್ದನು. ಅವನು ಸೂರ್ಯನಿಗಿಂತ ಪ್ರಖರ, ಚಂದ್ರನಿಗಿಂತ ಶೀತಲ, ಸಮುದ್ರ ಕ್ಕಿಂತ ಗಂಭೀರ ಮತ್ತು ಸುಮೇರುಪರ್ವತಕ್ಕಿಂತ ಸ್ಥಿರನಾಗಿ ದ್ದನು. ಅವನಿಗೆ ತನ್ನ ವಿವೇಕವೇ ಮಂತ್ರಿಯಾಗಿತ್ತು, ಬಿಲ್ಲೇ ಸೈನ್ಯವಾಗಿತ್ತು, ಮತ್ತು ತೋಳೇ ಯುದ್ಧದಲ್ಲಿ ಸಹಾಯಕವಾಗಿತ್ತು. ನಾಲ್ಕು ದಿಗ್ದೇವತೆಗಳು ಭೂಮಿಯ ಮೇಲೆ ವಾಸಿಸುವದನ್ನು ಅವನಲ್ಲಿ ಕಾಣಬಹುದಾಗಿತ್ತು: ಅವನು ಜಯಗಳಿಸುವಲ್ಲಿ ಇಂದ್ರನಾಗಿದ್ದನು; ಜಲಪ್ರದೇಶ ಗಳ ಒಡೆತನದಿಂದ ವರುಣನಾಗಿದ್ದನು; ದಾನದಲ್ಲಿ ಕುಬೇರ ನಾಗಿದ್ದನು ಮತ್ತು ಸರ್ವಸಮಭಾವದಲ್ಲಿ ಯಮನಾಗಿದ್ದನು. ಅವನ ಕೀರ್ತಿಯು ಸಜ್ಜನರ ಹೃದಯಕ್ಕೆ ಚಂದನಲೇಪವಾಗಿ, ಕಿವಿಗಳಲ್ಲಿ ರತ್ನಕುಂಡಲಗಳಾಗಿ ಮತ್ತು ಮುಖಗಳಲ್ಲಿ ಕರ್ಪೂರದ ಹುಡಿಯಾಗಿ ಕಾಣಿಸಿಕೊಳ್ಳುತ್ತಿತ್ತು. ದೇವತೆ ಗಳು ಸಮುದ್ರಮಥನ ಮಾಡಿ ಅಮೃತ ಪಡೆದಂತೆ ಅವನು ವೈರಿಗಳ ಸೇನಾಪತಿಗಳನ್ನು ದಿಙ್ಮೂಢಗೊಳಿಸುವ ತನ್ನ ತೋಳಿನಿಂದ ಧವಲಕೀರ್ತಿಯನ್ನು ಗಳಿಸಿದನು; ಮತ್ತು

ಅದು ಜಗತ್ತಿನಾದ್ಯಂತ ಹಬ್ಬಿತು. ಗಾಳಿಯನ್ನೇ ಕುಡಿದು ಪೊರೆ ಬೆಳೆಸಿಕೊಳ್ಳುವ ಸರ್ಪದಂತೆ ವೈರಿಗಳ ಪ್ರಾಣ ಹೀರುವ ಅವನ ಕತ್ತಿಯು ಕೀರ್ತಿ ಕವಚ ಬೆಳೆಸಿಕೊಂಡಿತು. ಅವನ ಬಲಗೈಯು ಕತ್ತಿ ಸೆಳೆಯುವ ನೆಪದಿಂದ ವೈರಿಗಳ ಲಕ್ಷ್ಮಿಯ ಮುಡಿ ಸೆಳೆಯುವ ಅಭ್ಯಾಸವನ್ನು ಮಾಡುತ್ತಿತ್ತು. ಪ್ರಜಾರಕ್ಷಣೆಯಲ್ಲಿ ಸದಾ ಜಾಗರೂಕನಾಗಿದ್ದ ಅವನಲ್ಲಿ ಬಂದು ಸೇರಿದ ಲಕ್ಷ್ಮೀದೇವಿಯು ಯೋಗನಿದ್ರಾವಶನಾದ ಮಹಾ ವಿಷ್ಣುವನ್ನು ಸ್ಮರಿಸಲಿಲ್ಲ. ಕಲಿಯ ಕಡುತಾಪದಿಂದ ಸುಟ್ಟು ಕರಿಕಾದ ಧರ್ಮವೃಕ್ಷವು, ಅವನು ದಾನ ಕೊಡುವಾಗ ಬಿಟ್ಟ ನೀರಿನಿಂದ ಪುನಃ ಅಂಕುರಿಸಿತು. ಅವನ ಪಾದಪೀಠದ ಘರ್ಷಣೆಯಿಂದ ಹಣೆಯ ಮೇಲೆ ಮೂಡಿದ ಗೆರೆಗಳುಳ್ಳ ವೈರಿರಾಜರು ದಶದಿಕ್ಕುಗಳಲ್ಲೂ ಅವನ ಕೀರ್ತಿಸ್ತಂಭಗಳಾಗಿ ದ್ದರು. ಅವನ ಪ್ರತಾಪವೆಂಬ ಬೆಂಕಿಯಿಂದ ಸುಟ್ಟು ಹೋಗಿವೆಯೋ ಎಂಬಂತೆ ಅವನ ವೈರಿರಾಜರ ಕೀರ್ತಿಯೆಲ್ಲ ಕಪ್ಪಾಗಿಬಿಟ್ಟಿತ್ತು. ಅವನ ವಿಜಯಯಾತ್ರೆಗೆ ಅಡ್ಡಿ ಬಂದಿದ್ದ ರಿಂದ ಅವನಿಂದ ಕಟ್ಟಿಹಾಕಲ್ಪಟ್ಟ ಕಾರ್ಮೋಡಗಳೋ ಎಂಬಂತೆ ಅವನ ಜಯಶಾಲಿ ಮದ್ದಾನೆಗಳು ಆತನ ಸಭಾಂಗಣದಲ್ಲಿ ತುಂಬಿಹೋಗಿದ್ದವು. ಅವನ ಅಶ್ವದಳ ಎಬ್ಬಿಸಿದ ಧೂಳಿಯಿಂದ ಅಕಸ್ಮಾತ್ತಾಗಿ ರಾಹುವಿನ ಆಗಮನ ವಾದಂತೆ ಸೂರ್ಯನು ಹೆದರುವಂತಾಯಿತು. ಅವನ ವೈಭವದ ಮುಂದೆ ಕುಬೇರ–ಇಂದ್ರರ ವೈಭವವು ಕಳಪೆಯಾಗಿ ಕಾಣಿಸುತ್ತಿತ್ತು.

**ವಿಜಯನಗರದ ವರ್ಣನೆ:**

ವಿಜಯಾ ಎಂಬುದು ಆ ಬುಕ್ಕರಾಯನ ರಾಜಧಾನಿಯಾಗಿತ್ತು. ವಿದ್ವಾಂಸರು ಅದನ್ನು ಇಂದ್ರನ ಅಮರಾವತಿಯೇ ಎಂದು ಹೊಗಳುತ್ತಿದ್ದರು. ಸ್ವರ್ಗಲೋಕದ ಸುತ್ತಲೂ ಹರಿಯುವ ದೇವಗಂಗೆಯೊಡನೆ ಸ್ಪರ್ಧಿಸುತ್ತ ತುಂಗಭದ್ರೆಯು ವಿಜಯನಗರದ ಸುತ್ತಲೂ ಹರಿದಿತ್ತು. ಆ ನಗರದ ಸುತ್ತಲೂ ಚಕ್ರಾಚಲಪರ್ವತಕ್ಕೆ ಸರಿದೂಗುವ ಕೋಟೆಗಳಿದ್ದವು. ಸುಮೇರುಪರ್ವತದ ಶಿಖರಗಳಂತಹ ಉತ್ತುಂಗ ಮತ್ತು ರತ್ನಖಚಿತ ಗೋಪುರಗಳಿಂದ ಹೊರಸೂಸುವ ಕಾಮನಬಿಲ್ಲಿನ ಬಣ್ಣಗಳಿಂದ ನಗರಕ್ಕೆ ಅಪೂರ್ವ ಶೋಭೆ ಬಂದಿತ್ತು. ಅಲ್ಲಿ ಚಂಪಕ–ಅಶೋಕ–ನಾಗಕೇಸರ ಮೊದಲಾದ ಪುಷ್ಪವೃಕ್ಷಗಳ ಉದ್ಯಾನಗಳು ಇದ್ದವು. ಅಲ್ಲಿಯ ಕ್ರೀಡಾಪರ್ವತಗಳಲ್ಲಿ ಕಸ್ತೂರೀಮೃಗಗಳು ಸ್ವಚ್ಛಂದವಾಗಿ ವಿಹರಿಸುತ್ತಿದ್ದವು. ಕ್ರೀಡಾಸರೋವರಗಳು ಕಮಲಪುಷ್ಪಗಳ ಸುವಾಸನೆಯಿಂದ ತುಂಬಿದ್ದವು; ಅವುಗಳಲ್ಲಿ ಹಂಸಗಳು ಓಲಾಡುತ್ತಿದ್ದವು; ಅವುಗಳ ಸೋಪಾನಗಳು ರತ್ನಖಚಿತವಾಗಿದ್ದವು.

ಆ ನಗರದಲ್ಲಿಯ ದಿನ್ನೆಗಳ ಮೇಲೆ ಎತ್ತರ ಮಹಲುಗಳನ್ನು ಕಟ್ಟಿದ್ದರು. ತಮ್ಮ ಬಿಳಿಯಬಣ್ಣದ ಮೂಲಕ ಅವು ಶರತ್ಕಾಲದ ಮೋಡಗಳಂತೆ ಕಂಗೊಳಿಸುತ್ತಿದ್ದವು; ಮತ್ತು ಬುಕ್ಕರಾಯನು ಸಕಲನಗರಗಳನ್ನು ಗೆದ್ದು ಗಳಿಸಿದ ಕೀರ್ತಿಯೇ ಆ ಎಲ್ಲ ಆಕಾರಗಳನ್ನು ತಳೆದಿದೆಯೋ ಎಂಬಂತೆ ಅನಿಸುತ್ತಿತ್ತು. ಆ ನಗರವು ಭೂಮಂಡಲದ ದಕ್ಷಿಣದಿಗ್ದೇ

ವಿಯು ಹಣೆಯ ಮೇಲಿನ ಸುಂದರತಿಲಕದಂತೆ ಶೋಭಿಸು ತ್ತಿತ್ತು. ಅದರಲ್ಲಿ ಸದ್ಗುಣಸಂಪನ್ನರಾದ ಬ್ರಾಹ್ಮಣರಿದ್ದರು; ಗಾಂಧರ್ವವಿದ್ಯಾಸಂಪನ್ನರಾದ ಸಂಗೀತ ವಿದ್ವಾಂಸರು ನೆಲಸಿ ದ್ದರು; ವಿಲಾಸಪ್ರಿಯ ಯುವಕರು ವಿಹರಿಸುತ್ತಿದ್ದರು. ಸುಮೇರು ಪರ್ವತದಲ್ಲೇ ಸಂಚರಿಸಲು ದೇವತೆ ಗಳು ಇಷ್ಟಪಡುವಂತೆ ಸಜ್ಜನರೆಲ್ಲ ಆ ನಗರದಲ್ಲಿಯೇ ಸಂಚರಿಸಲು ಬಯಸುತ್ತಿದ್ದರು. ಅದು ಸೌಭಾಗ್ಯ ಮತ್ತು ವೈಭವಗಳ ಕ್ರೀಡಾರಂಗವಾಗಿತ್ತು; ಸಕಲ ಸಂಪತ್ತುಗಳ ಆಗರವಾಗಿತ್ತು; ಸರ್ವವಿಧ ರತ್ನಗಳ ಸಾಗರವಾಗಿತ್ತು ಮತ್ತು ಸದ್ಗುಣಗಳ ಸಮುದ್ರವಾಗಿತ್ತು.

ಸೂರ್ಯಬಿಂಬವು ಒಮ್ಮೊಮ್ಮೆ, ಆ ನಗರದ ಎತ್ತರದ ಮಹಲುಗಳ ಶಿಖರಗಳಿಗೆ ತೂಗುಬಿದ್ದಂತೆ ಭಾಸವಾಗುತ್ತಿತ್ತು. ಅವುಗಳಲ್ಲಿ ಕ್ರೀಡಿಸುವ ಸುಂದರಿಯರು ತಮ್ಮ ಆಟದ ಚೆಂಡೆಂದು ಚಂದ್ರಬಿಂಬಕ್ಕೆ ಕೈಚಾಚುತ್ತಿದ್ದರು. ಅಲ್ಲಿಯ ಮಹಲುಗಳಲ್ಲಿ ಸಂಗೀತದ ಅಂಗವಾಗಿ ಮೃದಂಗ ಬಾರಿಸಿದಾಗ ಗುಡುಗು ಕೇಳಿಸಿದಂತಾಗಿ ನವಿಲುಗಳು ಕುಣಿಯಲಾರಂಭಿ ಸುತ್ತಿದ್ದವು. ಅಲ್ಲಿಯ ಸರೋವರಗಳ ಮೆಟ್ಟಿಲುಗಳ ರತ್ನ ಗಳು ಯಾವಾಗಲೂ ಬೆಳಕು ಬೀರುತ್ತಿದ್ದುದರಿಂದ ಅಲ್ಲಿ ರಾತ್ರಿಯೆಂಬುದೇ ಇಲ್ಲದಂತಾಗಿ ಚಕ್ರವಾಕಪಕ್ಷಿಗಳಿಗೆ ವಿರಹವೇ ಇರಲಿಲ್ಲ. ಚಂದ್ರನಲ್ಲಿ ಕಲಂಕವುಂಟಲ್ಲವೇ? ಅದರ ಕಾರಣ ಗೊತ್ತೇ? ವಿಜಯನಗರದ ಲಲನೆಯರ ಮುಖ ಸೌಂದರ್ಯದಿಂದ ಚಂದ್ರನ ಲಾವಣ್ಯಕ್ಕೆ ಸೋಲಾಗಿ ಅವನಿಗೆ ಹೃದಯವ್ಯಥೆಯಾಯಿತು; ಅದನ್ನು ಅವನು ಕಲಂಕದ ಮೂಲಕ ಬಚ್ಚಿಡಲು ಪ್ರಯತ್ನಿಸುತ್ತಿದ್ದಾನಷ್ಟೆ. ಆ ನಗರದಲ್ಲಿ

ಮನ್ಮಥನ ಹೂಬಾಣಗಳಿಗೆ ಆಸ್ಪದವೇ ಇರಲಿಲ್ಲ; ಅಲ್ಲಿಯ ಸುಂದರಿಯರ ಕಡೆಗಣ್ಣೋಟವೇ ಯುವಕರ ಹೃದಯವನ್ನು ಸೀಳುತ್ತಿತ್ತು. ಅಲ್ಲಿಯ ವನಿತೆಯರಿಂದ ಹಂಸಗಳು ನಡಿಗೆಯ ವೈಖರಿಯನ್ನು ಕಲಿಯುತ್ತಿದ್ದವು. ಆ ನಗರದಲ್ಲಿ ಮಹಿಳೆಯರ ಸ್ತನಗಳನ್ನು ಬಿಟ್ಟರೆ ಬೇರೆಲ್ಲೂ ಕಾಠಿಣ್ಯವಿರಲಿಲ್ಲ; ಅವರ ಗುಂಗುರು ಕೂದಲುಗಳ ಹೊರತು ಮತ್ತೆಲ್ಲೂ ಕೊಂಕು ಇರಲಿಲ್ಲ; ಅವರ ಕಟಿಪ್ರದೇಶ ಬಿಟ್ಟರೆ ಬೇರೆಡೆ ಸೊರಗುವಿಕೆಯೆಂಬುದೇ ಇರಲಿಲ್ಲ.

ಆ ವಿಜಯನಗರದ ಉಪನಗರವೇ ಪಂಪಾಪಟ್ಟಣ. ಅಲ್ಲಿ ಕುಬೇರಸದೃಶರಾದ ಅನೇಕ ಧನಿಕರಿದ್ದುದರಿಂದ ಅಲ್ಲಿ ನೆಲೆಸಿದ ವಿರೂಪಾಕ್ಷ ದೇವರಿಗೆ ಅಲಕಾಪಟ್ಟಣದ ಸ್ಮರಣೆಯೇ ತಪ್ಪುವಂತಾಗಿತ್ತು.

**ಬುಕ್ಕರಾಯನ ಹಿರಿಮೆ – ಗರಿಮೆ:**

ಇಂದ್ರನು ಅಮರಾವತಿಯಲ್ಲಿರುತ್ತ ಇಡಿಯ ಸ್ವರ್ಗಲೋಕವನ್ನು ಆಳಿಕೊಂಡಿದ್ದಂತೆ ಬುಕ್ಕರಾಯನು ವಿಜಯನಗರದಲ್ಲಿರುತ್ತ ಇಡಿಯ ಭೂಮಂಡಲವನ್ನು ಆಳುತ್ತಿದ್ದನು. ಅವನ ಸಂಪತ್ತು ಗೆಳೆಯರ ಉನ್ನತಿಗೆ ಸನ್ನದ್ಧ; ಅವನ ರಾಜನೀತಿ ವಿಶಾಲ ಮತ್ತು ಸಮಗ್ರ; ಹೀಗಾಗಿ ಮನುಮಹರ್ಷಿಯೇ ಬುಕ್ಕರಾಯನ ರೂಪದಲ್ಲಿ ಅವತರಿಸಿರಬೇಕೆಂದು ಜನ ತಿಳಿಯುತ್ತಿದ್ದರು. ಅವನು ಸಜ್ಜನರಿಗೆ ಆದರ್ಶನಾಗಿದ್ದನು. ಸತ್ತ್ವ–ರಜಸ್–ತಮಸ್‌ಗಳೆಂಬ ತ್ರಿವಿಧ ಗುಣಗಳಲ್ಲಿ ಸತ್ತ್ವಗುಣದ ಬಗ್ಗೆ ವಿಷ್ಣುವಿಗೆ ವಿಶೇಷವಿದ್ದಂತೆ ಧರ್ಮಾರ್ಥಕಾಮಗಳೆಂಬ ತ್ರಿವಿಧ ಪುರುಷಾರ್ಥಗಳಲ್ಲಿ ಧರ್ಮದ

ಬಗೆಗೆ ಅವನಿಗೆ ವಿಶೇಷ ಆಸ್ಥೆಯಿತ್ತು. ಅವನ ಕೈಗೆ ದಾನ, ಕಿವಿಗೆ ಶಾಸ್ತ್ರಶ್ರವಣ ಮತ್ತು ತಲೆಗೆ ಶಿವನ ಪಾದುಕೆಗಳು ಅಲಂಕಾರಗಳಾಗಿದ್ದವು. ಆ ಮೂಲಕ ಅವನು ಸದಾಕಾಲವೂ ಅಭ್ಯುದಯ ಸಾಧಿಸುತ್ತಿದ್ದನು. ವಿಂಧ್ಯ–ಮಲಯ–ಅಸ್ತ–ರೋಹಣ ಪರ್ವತಗಳಿಂದ ಮೊದಲು ಮಾಡಿ ಎಲ್ಲೆಡೆಯ ಅರಸರು ಅವನಿಗೆ ಅಂಕಿತರಾಗಿ ವಂದಿಸುತ್ತಿದ್ದರು. ವೈರಿಗಳೆಲ್ಲ ಅವನಿಗೆ ಹೆದರಿ ನಡುಗುತ್ತಿದ್ದರು. ಅವನು ಕುಲ ಪರಂಪರಾಗತವಾಗಿ ಬಂದಿರುವ ರಾಜ್ಯರಕ್ಷಣೆಯ ಕಾಯಕ ವನ್ನು ಬಲು ಎಚ್ಚರಿಕೆಯಿಂದ ನಿರ್ವಹಿಸುತ್ತಿದ್ದನು. ಮತ್ತು ಅನಾಸಕ್ತನಾಗಿಯೇ ಸಕಲಸುಖಗಳನ್ನು ಉಪಭೊಗಿಸು ತ್ತಿದ್ದನು.

ವಿಷ್ಣುವಿಗೆ ಲಕ್ಷ್ಮಿ, ಶಿವನಿಗೆ ಪಾರ್ವತಿ ಹೇಗೋ ಹಾಗೆ ಬುಕ್ಕ ರಾಯನಿಗೆ ದೇವಾಯಿ ಎಂಬವಳಿದ್ದಳು. ಅನೇಕ ನಕ್ಷತ್ರಗಳಿ ದ್ದರೂ ಚಂದ್ರನು ರೋಹಿಣಿಯನ್ನು ವಿಶೇಷವಾಗಿ ಪ್ರೀತಿಸು ವಂತೆ ಬುಕ್ಕರಾಯನಿಗೆ ಹಲವು ಮಡದಿಯರಿದ್ದರೂ ದೇವಾಯಿಯೇ ಅಚ್ಚುಮೆಚ್ಚಿನವಳಾಗಿದ್ದಳು. ಪೂರ್ಣಚಂದ್ರ ನಂತೆ ಆ ವೀರರಾಜನು ಕರ್ಣಾಟ ದೇಶದ ಜನರಿಗೆ ಆನಂದ ದಾಯಕನಾಗಿದ್ದನು. ಅವನು ದೇವಾಯಿಯೊಡನೆ ಕಾಲೋ ಚಿತವಾದ ಸಕಲಸುಖಗಳನ್ನು ಸವಿಯುತ್ತ ವಿಜಯನಗರದಲ್ಲಿ ನೆಲೆಸಿದ್ದನು.

## ಎರಡನೆಯ ಸರ್ಗ

**ಗರ್ಭಿಣಿ ದೇವಾಯಿಯ ಬಯಕೆಗಳು :**

ಬುಕ್ಕರಾಯನ ಮುದ್ದಿನ ಮಹಾರಾಣಿ ದೇವಾಯಿ ಗರ್ಭವತಿಯಾದಳು. ಅವಳು ರತ್ನಾಭರಣಗಳನ್ನು ತೆಗೆದಿಟ್ಟಳು; ಸೊರಗಿದ ಅವಳ ಮುಖ ಸ್ವಲ್ಪ ಬಿಳಿಚಿಕೊಂಡಿತು. ಆಗ ಅವಳು ಚಂದ್ರನ ಪ್ರತಿಬಿಂಬ ಮೂಡಿದ, ಕಮಲಗಳಿಲ್ಲದ ಶರತ್ಕಾಲದ ತೊರೆಯಂತೆ ಕಂಗೊಳಿಸಿದಳು. ಗರ್ಭದಲ್ಲಿಯ ಶಿಶುವಿಗೆ ಭೂಮಿಯನ್ನು ಆಳುವ ಶಿಕ್ಷಣ ಕೊಡಲೋ ಎಂಬಂತೆ ಅವಳಿಗೆ ಮಣ್ಣನ್ನು ತಿನ್ನುವ ಬಯಕೆಯಾಯಿತು. ಅವಳ ಬಯಕೆಗಳು ಅಸಾಮಾನ್ಯಗಳಾಗಿದ್ದು ದಿಟ್ಟತನವನ್ನು ತೋರಿಸುತ್ತಿದ್ದವು. ಆದ್ದರಿಂದ, ಜನಿಸುವ ರಾಜಕುಮಾರನು ವೀರನಾಗುವನೆಂಬುದು ಖಚಿತವಾಗಿತ್ತು. ಅವಳು ಸಮೀಪವೇ ತುಂಬಿ ಹರಿಯುತ್ತಿದ್ದ ತುಂಗಭದ್ರೆಯನ್ನು ಕಡೆಗಣಿಸಿ ತೆರೆಗಳನ್ನು ಎಬ್ಬಿಸುವ ಮದ್ದಾನೆಗಳೊಡನೆ ದೂರ ದಕ್ಷಿಣದ ತಾಮ್ರಪರ್ಣಿ ನದಿಯಲ್ಲಿ ಜಲಕ್ರೀಡೆಯಾಡಲು ಬಯಸಿದಳು. ಅಶಕ್ತಳಾದ ಅವಳಿಗೆ ಸಮೀಪದ ಹಾಗು ಜಿಂಕೆಗಳ ವಿಹಾರಸ್ಥಾನವಾದ ಕ್ರೀಡಾಪರ್ವತದ ತನಕ ಹೋಗುವದು ಅಸಾಧ್ಯವಾಗಿದ್ದರೂ, ಮಾನಸಿಕವಾಗಿ ಮಾತ್ರ ಅವಳು ಬಹುದೂರವಿರುವ, ಸಿಂಹಗಳ ನೆಲೆವೀಡಾದ ಮಲಯ ಪರ್ವತದ ಶಿಖರಗಳಲ್ಲಿ ಓಡಾಡುತ್ತಿದ್ದಳು. ವಿಷ್ಣುವು ಪಾತಾಲಲೋಕದಲ್ಲಿ ಗೈದ ಪರಾಕ್ರಮಗಳನ್ನು ಕೇಳಿದಾಗ ಅವಳಿಗೆ ಅವುಗಳನ್ನು ಅನುಸರಿಸುವ ಮನಸ್ಸಾಯಿತು. ತ್ರಿಪುರದಹನ ಮಾಡಲು ಪೃಥ್ವಿಯನ್ನು ರಥ,

ಬ್ರಹ್ಮನನ್ನು ಸಾರಥಿ, ಪರ್ವತರಾಜನನ್ನು ಬಿಲ್ಲು ಮತ್ತು ವಿಷ್ಣುವನ್ನು ಬಾಣ–ಮಾಡಿಕೊಂಡ ಶಿವನ ಪರಾಕ್ರಮವನ್ನು ನೆನೆದು ಆವಳು ಬಿದ್ದು ಬಿದ್ದು ನಗುತ್ತಿದ್ದಳು.

ಕಾಲಕ್ರಮೇಣ ದೇವಾಯಿಯ ದೇಹ ತುಂಬಿಕೊಂಡಿತು; ಕಣ್ಣುಗಳು ಮುಗ್ಧ ಮತ್ತು ಆಲಸ್ಯಭಾವವನ್ನು ತಳೆದವು; ಸೊಂಟ ಬೆಳೆಯತೊಡಗಿತು. ಇದನ್ನು ನೋಡಿದ ಮಹಾರಾಜನ ಸಂತೋಷಕ್ಕೆ ಸೀಮೆಯಿರಲಿಲ್ಲ. ಗರ್ಭದೊಳಗಿನ ಶಿಶುವನ್ನು ರಕ್ಷಿಸಲು ಬಂದ ನಾಗಿಣಿಯೋ ಎಂಬಂತೆ ಅವಳ ಕೆಳಹೊಟ್ಟೆಯ ಮೇಲೆ ಸೌಭಾಗ್ಯಸೂಚಕ ರೋಮಾವಲಿ ಕಾಣಿಸಿಕೊಂಡಿತು. ಅವಳ ಸ್ತನದ್ವಯವು, ನೀಲಿಕಮಲಗಳನ್ನು ಚುಂಚುಗಳಲ್ಲಿ ಹಿಡಿದ ಚಕ್ರವಾಕ ಜೋಡಿಯನ್ನು ಮೀರಿಸಿತು. ಅವಳೆಂದರೆ ನೀರುಳ್ಳ ಮೋಡವೆಂದೂ ರತ್ನವುಳ್ಳ ಚಿಪ್ಪೆಂದೂ ಚಂದ್ರೋದಯವನ್ನು ಸೂಚಿಸುವ ರಾತ್ರಿಯೆಂದೂ ಬುಕ್ಕರಾಯನು ಸಂತಸಪಟ್ಟನು. ಅವನು ಪುರೋಹಿತರ ಆದೇಶದಂತೆ ಶುಭಮುಹೂರ್ತದಲ್ಲಿ ರಾಣಿಯ 'ಪುಂಸವನ' ವಿಧಿಯನ್ನು, ತನ್ನ ವೈಭವಕ್ಕೆ ತಕ್ಕಂತೆ ನೆರವೇರಿಸಿ ಪ್ರಜೆಗಳಿಗೆ ಆನಂದ ಬೀರಿದನು.

**ಕಾವ್ಯದ ನಾಯಕ ಕಂಪಣನ ಜನನ :**

ನವಮಾಸ ತುಂಬಿದ ಬಳಿಕ ಒಂದು ಶುಭದಿನ, ಶುಭಗಳಿಗೆಯಲ್ಲಿ ಪಾರ್ವತಿಯು ಷಣ್ಮುಖನಿಗೆ ಜನ್ಮವಿತ್ತಂತೆ ಮಹಾರಾಣಿ ದೇವಾಯಿಯು ರಾಜಕುಮಾರನಿಗೆ ಜನ್ಮವಿತ್ತಳು. ಆಗ ದಿಕ್ಕುಗಳೆಲ್ಲ ಅವನ ಕೀರ್ತಿಯಿಂದ ಬಿಳಿಯ ಬಣ್ಣಕ್ಕೆ ತಿರುಗಿದವೋ ಎಂಬಂತೆ ಶುಭ್ರವಾಗಿ ಬೆಳಗಿದವು. ಶೀಘ್ರದಲ್ಲಿಯೇ ಭೂಮಂಡಲವನ್ನು ವಶಪಡಿಸಲಿರುವ ಅವನ ಹೆದರಿಕೆಯಿಂದಲೋ ಎಂಬಂತೆ ಕಲ್ಪವೃಕ್ಷಗಳ ಹೂಗಳ

ಸುಗಂಧ ಬೀರುವ ಶೀತಲವಾಯುವು ಮಂದ-ಮಂದವಾಗಿ ಬೀಸತೊಡಗಿದನು. ಅಗ್ನಿಯು ಹರ್ಷದಿಂದಲೋ ಎಂಬಂತೆ ಕುಣಿಯುತೊಡಗಿದನು; ಏಕೆಂದರೆ, ದಕ್ಷಿಣದೇಶಗಳಲ್ಲೆಲ್ಲ ಬಹು ಬೇಗ ಯಜ್ಞ-ಯಾಗಗಳು ನಿರ್ವಿಘ್ನವಾಗಿ ನಡೆಯುವ ವೆಂಬುದು ಆವನಿಗೆ ನಿಶ್ಚಿತವಾಗಿತ್ತು. ತ್ಯಾಗದಲ್ಲಿ ತಮ್ಮನ್ನು ಕೂಡ ಮೀರಿಸುವವನೆಂದು ತಿಳಿದೋ ಏನೊ, ಕಲ್ಪವೃಕ್ಷಗಳು ಮೋಡಗಳ ಮೂಲಕ ಹೂಮಳೆ ಸುರಿಸಿ ಅವನೊಡನೆ ಸಾಧಾನದ ಪ್ರಯತ್ನ ಮಾಡಿದವು. ಈ ವೀರಾಧಿವೀರನು ತಮ್ಮ ವೈರಿಗಳಾದ ಸಿಂಹಗಳನ್ನು ಬೇಟೆಯಾಡಿ ಕೊಲ್ಲುವನೆಂಬ ಹರುಷದಿಂದಲೊ ಎಂಬಂತೆ, ಮದೋದಕ ಸುರಿಸುವ ಆನೆಗಳು ಘೀಳಿಟ್ಟವು. ತಮ್ಮನ್ನೇರಿ ವಿಜಯಗಳಿಸಿ ಕೀರ್ತಿಶಾಲಿಯಾಗುವನೆಂದೊ ಏನೊ ಕುದುರೆಗಳು ಹರುಷದಿಂದ ಕೆನೆದವು.

ನಗರದಲ್ಲೆಲ್ಲ ಮಂಗಲವಾದ್ಯಗಳು ಮೊಳಗಿದವು; ವಂದಿ-ಮಾಗಧರೆಲ್ಲ ಹಾಡತೊಡಗಿದರು; ಸಂತಸದ ಕೋಲಾಹಲವೇ ಎದ್ದುಬಿಟ್ಟಿತು. ಕುಂತಲ ದೇಶದ ಆ ಮಹಾರಾಜನಿಗೆ ಪುತ್ರಜನ್ಮದ ಸಂತಸದ ವಾರ್ತೆ ತಂದವರಿಗೆ ಯಾವ ಕಾಣಿಕೆ ಕೊಟ್ಟರೂ ತೃಪ್ತಿಯಾಗಲಿಲ್ಲ; ತನ್ನನ್ನೇ ಕೊಟ್ಟು ಬಿಡಬೇಕೆಂಬ ಇಚ್ಛೆಯಾಯಿತು. ರಾಜಾಜ್ಞೆಯಂತೆ ಸೆರೆಯಾಳುಗಳನ್ನು ಬಿಡುಗಡೆಮಾಡಿ ಸೆರೆಮನೆಗಳನ್ನು ತೆರವು ಮಾಡಲಾಯಿತು- ಭವಿಷ್ಯದಲ್ಲಿ ಬರಲಿದ್ದ ತುರುಷ್ಕ ಕೈದಿಗಳಿಗೆ ಅವಕಾಶ ಮಾಡಿಕೊಡಲೋ ಎಂಬಂತೆ.

ಮಹಾರಾಜನು ಸ್ನಾನ ಮಾಡಿ, ಶುಭ್ರವಸ್ತ್ರ ಧರಿಸಿ, ಬ್ರಾಹ್ಮಣರಿಗೆ ಧಾರಾಳವಾಗಿ ದಾನ ನೀಡಿ, ಪರಮಾನಂದದಿಂದ, ಪುತ್ರನ ಮುಖದರ್ಶನ ಮಾಡಲು ಅಂತಃಪುರವನ್ನು ಪ್ರವೇಶಿಸಿದನು. ಆವನು ಕೃಶಾಂಗಿಯಾದ ಮಹಾರಾಣಿಯ ತೊಡೆಯ

ಮೇಲೆ, ಶರತ್ಕಾಲದ ತೊರೆಯ ತೆರೆಯ ಮೇಲಿನ ಮರಿಹಂಸದಂತೆ ಆ ಸುಕುಮಾರನನ್ನು ಕಂಡನು.

ಆ ಕೋಮಲ ರಾಜಕುಮಾರನ ದೇಹದ ಸುತ್ತಲೂ ಪ್ರಭಾವಲಯ ಹಬ್ಬಿತ್ತು. ಶತ್ರುಗಳ ರಾಜ್ಯಲಕ್ಷ್ಮಿಯ ಮುಡಿಯನ್ನು ಸೆಳೆವ ಕಲೆಯನ್ನು ಆಗಲೇ ರೂಢಿ ಮಾಡಿಕೊಳ್ಳುತ್ತಿದ್ದಾನೋ ಎಂಬಂತೆ ಅವನ ಎರಡೂ ಕೈಗಳು ಮುಷ್ಟಿ ಕಟ್ಟಿದ್ದವು. ಅವನ ಪಾದಗಳ ಮೇಲೆ ಶಂಖ, ಚಕ್ರ ಛತ್ರ, ಕಮಲ, ಧ್ವಜ ಮತ್ತು ಮೀನಗಳ ಶುಭಚಿಹ್ನೆಗಳಿದ್ದವು; ಅವನ ಬೆರಳುಗಳು ಮನಮೋಹಕವಾಗಿದ್ದವು. ಅವನ ಎದೆಯ ಮೇಲೆ ಶ್ರೀವತ್ಸದ ಮುದ್ರೆಯಿತ್ತು ಇದರಿಂದ ಅವನು ವಿಷ್ಣುವಿನ ಅವತಾರನೆಂಬುದೂ ಜೀವನವಿಡೀ ಅವಿಚ್ಛಿನ್ನವಾಗಿ ಲಕ್ಷ್ಮಿಯನ್ನು ವಶದಲ್ಲಿರಿಸುವನೆಂಬುದೂ ಸ್ಪಷ್ಟವಾಗಿತ್ತು. ಅವನ ಹಣೆ ಅಗಲವಾಗಿತ್ತು; ಹುಬ್ಬುಗಳ ನಡುವೆ ರೋಮ ಮೂಡಿತ್ತು; ವಿಶಾಲವಾದ ಕಣ್ಣುಗಳು ಅರಳಿದ ಕಮಲದ ದಳಗಳಂತಿದ್ದವು; ಮೂಗು ಉನ್ನತವಾಗಿತ್ತು; ಕೆಂದುಟಿಗಳ ನಡುವೆ ನಸುನಗೆ ನರ್ತಿಸುತ್ತಿತ್ತು. ಹೀಗೆ ಆ ಮುಖವು ಸೌಂದರ್ಯದ ನಿಧಿಯೇ ಆಗಿತ್ತು. ಆ ಅಕೃತ್ರಿಮ ಸೌಂದರ್ಯವನ್ನು ಪುನಃ ಪುನಃ ಸವಿದು ನಲಿಯಬೇಕೆಂಬ ಅರಸನಿಗೆ ಅವನ ಕಣ್ಣುಗಳಿಂದ ಹರಿಯುವ ಆನಂದಬಾಷ್ಪಗಳೇ ಅಡ್ಡಿ ಬಂದವು. ಅವನು ತನ್ನ ಕಣ್ಣುಗಳಿಂದಲೇ ಸತ್ಪುತ್ರನನ್ನು ಆಲಿಂಗಿಸುತ್ತ ಸಂತಸದಿಂದ ರೋಮಾಂಚಗೊಂಡನು.

ರಾಜಪುರೋಹಿತನ ಆದೇಶದಂತೆ ಶುಭದಿನದಲ್ಲಿ 'ಜಾತಕರ್ಮ' ವಿಧಿ ಸಾಂಗವಾಗಿ ನೆರವೇರಿತು. ಆಹುತಿಗಳಿಂದ ಪ್ರಜ್ವಲಿಸುವ ಯಜ್ಞಾಗ್ನಿಯಂತೆ ರಾಜಕುಮಾರನು ಪ್ರಕಾಶಮಾನನಾಗಿ ಬೆಳೆಯತೊಡಗಿದನು. ದೂರದರ್ಶಿ

ಯಾದ ಮಹಾರಾಜನು "ನಿಶ್ಚಿತವಾಗಿಯೂ ಈತನು ರಣರಂಗದಲ್ಲಿ ವೈರಿಗಳನ್ನೆಲ್ಲ ಕಂಪಿಸುವನೆ"ಂದು ಅರಿತು ರಾಜಕುಮಾರನಿಗೆ ಕಂಪಣ ಎಂದು ಹೆಸರಿಟ್ಟನು. ಯಜ್ಞದ ದೀಕ್ಷೆ ತೊಟ್ಟ ಯಜಮಾನನು ತುಪ್ಪ ಮೊದಲಾದ ಆಹುತಿಗಳಿಂದ ಅಗ್ನಿಯನ್ನೂ ಮೋಡವು ಮಳೆ ಸುರಿಸಿ ಸಸ್ಯಗಳನ್ನೂ ಬೆಳೆಯಿಸುವಂತೆ, ಮಹಾರಾಜನು ನುರಿತ ದಾಯಿಗಳಿಂದ ರಾಜಕುಮಾರನನ್ನು ಬೆಳೆಯಿಸಿದನು. ದಿನಗಳೆದಂತೆ ಕುಮಾರನ ತೊದಲ್ನುಡಿಗಳನ್ನು ಕೇಳಿ, ಎಡವುವ ನಡಿಗೆಯನ್ನು ನೋಡಿ, ಮಹಾರಾಜನು ಆನಂದ ತುಂದಿಲನಾದನು. ಅರೆಬಿರಿದ ಹಲ್ಲುಗಳುಳ್ಳ ಕುಮಾರನ ಸುಗಂಧಪೂರ್ಣ ಮುದ್ದು ಮುಖವನ್ನು ಚುಂಬಿಸಿದಷ್ಟು ಚುಂಬನದ ಬಯಕೆ ರಾಜನಲ್ಲಿ ಬಲಿಯಿತೇ ಹೊರತು ಕಡಿಮೆಯಾಗಲಿಲ್ಲ. ಮಗನನ್ನು ಅಪ್ಪಿಕೊಂಡಾಗಲಂತೂ ಅವನು ಅಲೌಕಿಕ ಸುಖವನ್ನೇ ಅನುಭವಿಸುತ್ತಿದ್ದನು. ಅರಮನೆಯ ಅಂಗಳದಲ್ಲಿ ಅಂಬೆಗಾಲಿಕ್ಕುತ್ತ ಆಟವಾಡುತ್ತಿದ್ದ ರಾಜಕುಮಾರನನ್ನು ನೋಡಿ ಬುಕ್ಕರಾಯ-ದೇವಾಯಿಯರಿಗೆ ಸ್ವರ್ಗಸುಖವೂ ಬೇಡವಾಯಿತು. ಕ್ಷೀರಸಾಗರದಿಂದ ಪಾರಿಜಾತ ಮತ್ತು ಚಿಂತಾಮಣಿಗಳು ಉದ್ಭವಿಸಿದಂತೆ, ಕಾಲಕ್ರಮೇಣ ದೇವಾಯಿಯಿಂದ ಕಂಪಣ ಮತ್ತು ಸಂಗಮರೆಂಬ ಮಕ್ಕಳು ಜನಿಸಿದರು. ತಮ್ಮಂದಿರೊಡನೆ ಹಿರಿಯ ಕಂಪಣನ ಬೆಳವಣಿಗೆಯನ್ನು ನೋಡುತ್ತಿದ್ದ ಪ್ರಜೆಗಳು ಶುಕ್ಲಪಕ್ಷದ ಚಂದ್ರನನ್ನು ನೋಡಿದಂತೆ ಆನಂದಪಟ್ಟರು. ಶಿವನು ತನ್ನ ಮೂರು ಕಣ್ಣುಗಳಾದ ಸೂರ್ಯ-ಚಂದ್ರ-ಅಗ್ನಿಗಳಿಂದ ಬೆಳಗುವಂತೆ, ಜಯ ತರುವ ಮೂರುವಿಧ ರಾಜಶಕ್ತಿಗಳಾದ ಪ್ರಭುಶಕ್ತಿ-ಉತ್ಸಾಹಶಕ್ತಿ-ಮಂತ್ರಶಕ್ತಿಗಳಿಂದ ರಾಜನೀತಿಯು ಬೆಳಗು

ವಂತೆ ತ್ರಿವಿಧ ಪುರುಷಾರ್ಥಗಳಾದ ಧರ್ಮ-ಅರ್ಥ-ಕಾಮ ಗಳಿಂದ ಜೀವನವು ಬೆಳಗುವಂತೆ ಬುಕ್ಕರಾಯನು ತನ್ನ ಮೂವರು ಮಕ್ಕಳಿಂದ ವಿರಾಜಿಸಿದನು.

## ಮೂರನೆಯ ಸರ್ಗ

### ಯುವರಾಜ ಕಂಪಣನ ಶಿಕ್ಷಣ, ವಿವಾಹ:

ಚೌಲಕರ್ಮವು ಮುಗಿದ ಬಳಿಕ, ಹಿರಿಯ ರಾಜಕುಮಾರ ನಾದ ಕಂಪಣನು ತಾನಾಗಿಯೇ ಸಕಲಕಲೆಗಳಲ್ಲಿ ಪಾರಂಗತ ನಾದನು; ಅವನಿಗೆ ಗುರೂಪದೇಶವು ಕೇವಲ ನೆಪಮಾತ್ರ ವಾಗಿತ್ತು. ಯುದ್ಧವಿದ್ಯಾಪ್ರವೀಣರಿಂದ ಶಸ್ತ್ರಾಸ್ತ್ರಗಳ ಮರ್ಮವನ್ನೆಲ್ಲ ಅರಿತ ತಂದೆ ಬುಕ್ಕರಾಯನಿಂದಲೇ ಕಂಪಣನು ಆ ವಿದ್ಯೆಯನ್ನು ಕಲಿತು, ಬಿಲ್ಲು, ಕತ್ತಿ ಮೊದಲಾದ ಎಲ್ಲ ಶಸ್ತ್ರಗಳ ಪ್ರಯೋಗದಲ್ಲಿ ನಿಪುಣನಾದನು. ಅವನು ಯುಧಿಷ್ಠಿರನಂತೆ ಸತ್ಯವಂತನಾಗಿದ್ದನು; ಭೀಮ ನಂತೆ ಶಕ್ತಿಸಂಪನ್ನನಾಗಿದ್ದನು; ಅರ್ಜುನನಂತೆ ಬಿಲ್ಲುಗಾರ ನಾಗಿದ್ದನು; ನಕುಲನಂತೆ ಅಶ್ವವಿದ್ಯೆಯನ್ನು ಅರಿತಿದ್ದನು. ಮತ್ತು ಸಹದೇವನಂತೆ ಕತ್ತಿ ಯುದ್ಧದಲ್ಲಿ ಮೊದಲಿಗನಾಗಿ ದ್ದನು. ಹೀಗೆ ಪಂಚಪಾಂಡವರೂ ಅವನಲ್ಲಿ ಒಟ್ಟಾಗಿದ್ದರು.

ಹಿರಿಯ ರಾಜಕುಮಾರ ಕಂಪಣನ ಅಂಗಾಂಗಗಳು ಬೆಳೆದಂತೆ ಅವನಲ್ಲಿ ಶೈಶವ ಹಿಂದಾಗಿ ತಾರುಣ್ಯ ಉದಯಿ ಸಿತು. ಅವನ ನಡಿಗೆ ಗಜಗತಿಯಂತೆ ಗಂಭೀರವಾಗಿತ್ತು; ಸಿಂಹಕಟಿ ಅವನದಾಗಿತ್ತು; ಅವನು ಆಜಾನುಬಾಹು ಆಗಿದ್ದನು. ಸೌಂದರ್ಯದ ಮದದಿಂದ ಕೊಬ್ಬಿದ ಮನ್ಮಥ

ನನ್ನು ಕಂಪಣನು ತನ್ನ ಪಾದದ ಸೌಂದರ್ಯದಿಂದ ಗೆದ್ದು ಅವನ ಮೀನಲಾಂಛನವುಳ್ಳ ವಿಜಯಪತಾಕೆಯನ್ನು ಸೆಳೆದು ತಂದಿದ್ದಿರಬೇಕು. ಇಲ್ಲವಾದರೆ ಅವನ ಅತಿಕೋಮಲವಾದ ಹಸ್ತದ ಮೇಲೆ ಮೀನಲಾಂಛನ ಹೇಗೆ ಮೂಡಿ ಬಂದಿತು? ಸುಂದರಿಯರ ವಿಶಾಲವಾದ ಎರಡೂ ಸ್ತನಗಳು ಹಿಡಿಸುವಷ್ಟು ಅವನ ಎದೆ ವಿಶಾಲವಾಗಿತ್ತು. ಅವನ ತೋಳುಗಳು ಬಲಶಾಲಿ ಗಳಾಗಿದ್ದು ನೋಡುವವರ ಕಣ್ಣಿಗೆ ಹಬ್ಬವನ್ನುಂಟುಮಾಡು ತ್ತಿದ್ದವು. ಚಂದ್ರನ ಮೇಲಿನ ಕಪ್ಪುಕಲೆಯನ್ನು ಮಧ್ಯ ಭಾಗದಿಂದ ತೆಗೆದು ಅಂಚಿಗೆ ತಂದು ಗೆರೆಯಂತೆ ಹಬ್ಬಿಸಿದರೆ ಆಗ ಅಂತಹ ಚಂದ್ರಬಿಂಬವು, ಅದೇ ಆಗ ಮೂಡುತ್ತಿದ್ದ ಗಡ್ಡದಿಂದ ಶೋಭಿಸುವ ಕಂಪಣನ ಮುಖಕ್ಕೆ ಹೋಲಿಕೆ ಯಾಗಬಹುದು. ತಮ್ಮ ವಿಶಾಲತೆಗೆ ಕಿವಿಗಳು ಮೇರೆ ಹಾಕಿದ್ದರಿಂದ ಅವುಗಳ ಮೇಲಿನ ಸಿಟ್ಟನ್ನು ಕಣ್ಣುಗಳು ತಮ್ಮ ಅಂಚಿನೊಳಗಿನ ಕೆಂಬಣ್ಣದಿಂದ ಸೂಚಿಸಿದವು. ಎರಡೂ ಕಣ್ಣುಗಳು ಪರಸ್ಪರರ ಪ್ರದೇಶವನ್ನು ಆಕ್ರಮಿಸ ಬಾರದೆಂದು ದೇವರು ಅವನ ದೀರ್ಘ ಮತ್ತು ಉನ್ನತ ಮೂಗನ್ನು ನಿರ್ಮಿಸಿರಬೇಕೆಂದು ಜನರು ನಂಬಿದರು. ಅವನ ಪ್ರತಾಪದೊಡನೆ ದೇಹವೂ ಬೆಳೆಯತೊಡಗಿತು; ಕೀರ್ತಿಯೊಡನೆ ಕಣ್ಣು ಶುಭ್ರವಾಗತೊಡಗಿತು; ಸದ್ಗುಣ ಗಳೊಡನೆ ಕುತ್ತಿಗೆ ಅಗಲವಾಗಲಾರಂಭಿಸಿತು; ಮತ್ತು ಧ್ವನಿಯೊಡನೆ ವಿಚಾರದಲ್ಲಿಯೂ ಗಾಂಭೀರ್ಯ ಮೂಡತೊಡ ಗಿತು.

ಯೌವನಾವಸ್ಥೆಯನ್ನು ತಲುಪಿದ ರಾಜಕುಮಾರ ನೊಡನೆ ಅನೇಕ ರಾಜಕುಮಾರಿಯರ ವಿವಾಹ-ಸಮಾರಂಭ ಗಳು ನೆರವೇರಿದವು. ಆದರೆ ಇಂದ್ರನಿಗೆ ಶಚಿ, ವಿಷ್ಣುವಿಗೆ

ಲಕ್ಷ್ಮಿ, ಮತ್ತು ಶಿವನಿಗೆ ಪಾರ್ವತಿಯಿದ್ದಂತೆ...*. ಅವಳೊಡನೆ ರತಿಸುಖವನ್ನು ಅನುಭವಿಸುತ್ತಿದ್ದ ಕಂಪಣನನ್ನು ನೋಡಿ ದೇವತೆಗಳು ಸಹ ಅಸೂಯೆಪಟ್ಟರು.

## ಕಂಪಣನಿಗೆ ಬುಕ್ಕರಾಯನ ಉಪದೇಶ :

ನಯ-ವಿನಯಗಳಿಂದ ಕೂಡಿದ ರಾಜಕುಮಾರನು ವೈರಿಗಳನ್ನು ಗೆದ್ದು ಕೀರ್ತಿಶಾಲಿಯಾಗಬೇಕೆಂದು ಬುಕ್ಕರಾಯನು ಬಯಸಿ ಅವನಿಗೆ ಈ ರೀತಿ ಉಪದೇಶ ನೀಡಿದನು:

"ಮಗೂ, ತಾರುಣ್ಯದಲ್ಲಿ ಮನಸ್ಸಿಗೆ ಅಜ್ಞಾನದ ಕತ್ತಲೆ ಕವಿಯುವದು ಸಹಜ. ಯೋಗ್ಯ ಉಪದೇಶದಿಂದ ದೊರೆತ ಜ್ಞಾನದೀಪವು ಮಾತ್ರ ಆ ಕತ್ತಲೆಯನ್ನು ನಿವಾರಿಸಬಲ್ಲದು ಎಂಬುದು ಬಲ್ಲವರ ಅಭಿಪ್ರಾಯ. ಆದ್ದರಿಂದ ನನ್ನ ಈ ಉಪದೇಶವನ್ನು ಮನಗೊಟ್ಟು ಕೇಳು. ಗುರುವಿನ ಉಪದೇಶವೆಂದರೆ ಕಾಠಿಣ್ಯವಿಲ್ಲದ ಕರ್ಣಕುಂಡಲ, ಕಪ್ಪುಬಣ್ಣವಿಲ್ಲದ ಕಾಡಿಗೆ ಮತ್ತು ದೇಹಶೋಷಣೆಯಿಲ್ಲದ ಆಶ್ಚರ್ಯಕಾರಕ ತಪಸ್ಸು ಎಂದು ಹೇಳುತ್ತಾರೆ. ಆನೆ ಮದಕ್ಕೆ ಬಲಿಯಾಗಿ ಕಣ್ಣುಮುಚ್ಚಿಕೊಳ್ಳುತ್ತದೆ; ತಾನು ಎಬ್ಬಿಸಿದ ಧೂಳಿನಿಂದ ಮಲಿನವಾಗುತ್ತದೆ; ಬಂಧನಕ್ಕೊಳಗಾಗಿ ಕಂಬಕ್ಕೆ ಕಟ್ಟುಬೀಳುತ್ತದೆ ಮತ್ತು ಮಾಹುತನ ಮಾತನ್ನು ಕೇಳುವದಿಲ್ಲ. ಅದರಂತೆಯೇ, ಯೌವನದಿಂದ ಕೊಬ್ಬಿದ ದುಷ್ಟ ವಂಚಕರು ತಮ್ಮ ಸೊಕ್ಕಿನಿಂದ ಸರಿಯಾದುದನ್ನು ನೋಡುವದಿಲ್ಲ; ತಾವು ಗೈದ ಪಾಪದಿಂದ ಅಪವಿತ್ರರಾಗುತ್ತಾರೆ; ಪೂರ್ವಗ್ರಹಪೀಡಿತರಾಗಿ ತಮ್ಮನ್ನು ತಾವೇ ಅವು

* "ಅವನಿಗೆ ಗಂಗಾದೇವಿ ಮುದ್ದಿನ ಮಡದಿಯಾಗಿದ್ದಳು" ಎಂದಿದ್ದಿರಬೇಕು. ಆದರೆ ಈ ಸಾಲು ಅಳಿಸಿಹೋಗಿದೆ.

ಗಳಿಗೆ ಕಟ್ಟಿಕೊಳ್ಳುತ್ತಾರೆ ಮತ್ತು ಸದ್ಗುರುವಿನ ಹಿತಕಾರಕ ಉಪದೇಶವನ್ನು ಕೇಳುವದಿಲ್ಲ. ಯೌವನದ ಮದದಿಂದ ಮನುಷ್ಯರ ಬುದ್ಧಿಗೆ ಮಂಕು ಕವಿದಾಗ, ಅಮಾವಾಸ್ಯೆಯ ಕತ್ತಲೆಯ ರಾತ್ರಿಯಲ್ಲಿ ಚಂದ್ರೋದಯವು ಅಸಂಭವವಾಗುವಂತೆ ಅವರಲ್ಲಿ ಸುಜ್ಞಾನವು ಮೂಡುವದಿಲ್ಲ. ಆಗ, ಕಾಮವಿಕಾರವೇ ಜಯಗಳಿಸುತ್ತದೆ ಮತ್ತು ಈ ದುರವಸ್ಥೆಯನ್ನು ದಾಟಿ ಮುಂದೆ ಹೋಗುವದು ಅವರಿಗೆ ಅಸಾಧ್ಯವಾಗುತ್ತದೆ. ಅಹಂಕಾರವೆಂಬ ಮರವು ಚಿಗುರುಬಿಟ್ಟಾಗ ಅದು ಕರುಣೆಯೆಂಬ ಝರಿಯನ್ನು ಶೋಷಿಸಿ ಒಣಗಿಸಿಬಿಡುತ್ತದೆ. ತಾರುಣ್ಯವು ಮೂಡಿದಾಗ ಬುದ್ಧಿಯ ಬೆಳಕು ಮಾಯವಾಗುತ್ತದೆ; ಹೀಗಾದಾಗ ಯೋಗ್ಯ ಅರಿವು ಯಾರಿಗೆ ಸಾಧ್ಯ? ತರುಣನೂ ರಾಜನೀತಿಯನ್ನು ಅರಿಯದವನೂ ಸ್ವತಂತ್ರನೂ ಸಿರಿಯಿಂದ ಕೊಬ್ಬಿದವನೂ ಆದ ಅರಸನನ್ನು, ಗ್ರಹಣಕಾಲದ ರಾತ್ರಿಯು ಚಂದ್ರನನ್ನು ಪೂರ್ಣ ನುಂಗಿಬಿಡುವಂತೆ, ದುರ್ದೆಸೆಗಳಿಂದ ಕೂಡಿದ ಗಂಡಾಂತರವು ಪೂರ್ಣ ಆಕ್ರಮಿಸಿಬಿಡುತ್ತದೆ.

"ಸ್ತ್ರೀಯರೆಂದರೆ ಮನ್ಮಥನ ಕಪಟನಾಟಕದ ನಟಿಯರು; ಕಾಮವಶರಾದವರನ್ನು ಮೋಸದಿಂದ ಹಿಡಿದು ಬಂಧಿಸುವ ಬಲೆಗಳು; ಸರ್ವವಿಧ ಸಂಕಟಗಳಿಗೆ ಕಾರಣರು; ಇಂಥವರನ್ನು ಯಾವ ಜಾಣನು ನಂಬುವನು? ಜೂಜಿನಿಂದ ನೀನು ದೂರ ಇರಬೇಕು. ಜೂಜುಗಾರನ ಬಳಿ ಫಲವತ್ತಾದ ಭೂಮಿ, ಅನಮೋಲ್ಯ ಮುತ್ತು-ರತ್ನಗಳು, ಸಂಪತ್ತು, ಸಶಕ್ತ ಶರೀರ, ಹೆಂಡಿರು-ಮಕ್ಕಳು–ಹೀಗೆ ಎಲ್ಲ ಇದ್ದರೂ ಅವೆಲ್ಲ ಬೇರೆಯವರವೇ ಸೈ. ಅವು ಅವನ ಬಳಿ ಹೆಚ್ಚುದಿನ ಇರಲಾರವು. ಬೇಟೆಯೂ ಒಳಿತಲ್ಲ; ಅದರಿಂದ ಫಲವಿಲ್ಲ;

ಪ್ರಾಣಕ್ಕೆ ಅಪಾಯ ಮಾತ್ರ ಬಹಳ. ಮನೋವಿನೋದಕ್ಕಾಗಿ ಕೂಡ ಬೇಟೆಯಾಡಬಾರದು. ಬೇಟೆಯೆಂದರೆ ಅರಸರೆಂಬ ಆನೆಗಳನ್ನು ಹಿಡಿಯಲು ತೋಡಿದ ಆಳವಾದ ಗುಂಡಿಯೆಂದು ಬಲ್ಲವರು ಹೇಳುತ್ತಾರೆ. ಮೊದಲೇ ಯೌವನದ ಕೊಬ್ಬು ಏರಿರುತ್ತದೆ; ಅದರಲ್ಲಿಯೂ ಧನಮದವು ಎಡವುವಂತೆ ಮಾಡುತ್ತದೆ. ಹೀಗಾದಾಗ ಮತ್ತೆ ಮದ್ಯಪಾನ ಸೇರಿದರೆ ಏನಾದೀತು? ಸನ್ನಿಪಾತಜ್ವರ ಬಂದವನಿಗೆ ದೆವ್ವ ಬಡಿದಾಗ ಹಾವು ಕಚ್ಚಿದಂತಾಗಲಿಕ್ಕಿಲ್ಲವೆ? ಆದ್ದರಿಂದ ಮದ್ಯದ ಸಮೀಪ ಸುಳಿಯಬೇಡ.

"ಪ್ರಜೆಗಳನ್ನು ಆನಂದದಲ್ಲಿಡುವದರಲ್ಲಿಯೇ ನೀನು ನಿರತನಾಗಿದ್ದರೂ ಕಠೋರ ಮಾತುಗಳನ್ನಾಡಬೇಡ. ಕಠೋರ ಮಾತುಗಳಿಂದ ಜನಪ್ರಿಯತೆಯನ್ನು ಕಳೆದುಕೊಳ್ಳುವಿ. ಮೋಡವು ಹಿತಕರವಾದ ಮಳೆ ಸುರಿಸುತ್ತಿದ್ದರೂ ಅದರ ಮಿಂಚು-ಗುಡುಗುಗಳಿಗೆ ಜನ ಹೆದರುವದಿಲ್ಲವೆ?

"ಪ್ರಜೆಗಳೇ ರಾಜನ ಸಂಪತ್ತು. ಅವರನ್ನು ಕಠೋರಶಿಕ್ಷೆಯಿಂದ ಪೀಡಿಸುವ ರಾಜನು, ಮರ ಹತ್ತಿ ಬುಡಕ್ಕೆ ಕೊಡಲಿಯೇಟು ಹಾಕುವ ಮೂರ್ಖನೇ ಸರಿ. ಧರ್ಮಾದಿ ಪುಣ್ಯಕಾರ್ಯಗಳಿಗೆ ಧನವೇ ಸಾಧನ; ಅಂಥ ಧನವನ್ನು ಅಯೋಗ್ಯರಿಗೆ ದಾನ ಮಾಡುವ ಅರಸನು ಯಜ್ಞಾಗ್ನಿಯಲ್ಲಿ ಅರ್ಪಿಸಬೇಕಾದ ಆಹುತಿಯನ್ನು ಮಸಣದ ಬೆಂಕಿಯಲ್ಲಿ ಹಾಕುವ ದಡ್ಡನಿಗೆ ಸಮಾನ. ಮದ್ಯಪಾನ, ಜೂಜು, ಸ್ತ್ರೀಲೋಲುಪತೆ, ಬೇಟೆ, ಅತಿದಂಡನೆ, ಕಟುವಚನ ಮುಂತಾದ ವ್ಯಸನಸಮೂಹವೇ ಅರಸನ ಕೀರ್ತಿಶರೀರವನ್ನು ಶೋಷಿಸುವ ಕ್ಷಯರೋಗ. ಇದಕ್ಕೆ ತುತ್ತಾದ ಅರಸರು ವೈರಿಗಳಲ್ಲಿ ನಗೆಗೀಡಾಗುತ್ತಾರೆ.

''ಪೂರ್ವಜನ್ಮಪುಣ್ಯದಿಂದ ಪ್ರಾಪ್ತವಾದ ಸಂಪತ್ತನ್ನು ಸದ್ಗುಣಗಳ ಮೂಲಕ ರಕ್ಷಿಸಲಾರದ ಅರಸರು ಕೈಗೆ ದೊರೆತ ಸುಗಂಧ ಭರಿತ ಹೂಮಾಲೆಯನ್ನು ಹಿಸುಕಿ ಹಾಕುವ ಮಂಗಗಳೇ ಸರಿ!

"ಆದರೆ ನೀನು ಸಾಮಾನ್ಯನಲ್ಲ. ನಿನ್ನಲ್ಲಿ ಹುಟ್ಟಿನಿಂದಲೆ ಒಳ್ಳೆಯ ಬುದ್ಧಿಯಿದೆ. ಅದು ಸದ್ಗುರುಗಳ ಉಪದೇಶದಿಂದ ಸಂಸ್ಕಾರ ಪಡೆದು ಪರಿಶುದ್ಧವಾಗಿದೆ. ನಿನ್ನಂಥವರು ಮೇಲೆ ಹೇಳಿದ ವ್ಯಸನಗಳಿಂದ ದೂರವಿದ್ದು ಯೋಗ್ಯಕೃತಿಗಳನ್ನೇ ಮಾಡುತ್ತಾರೆ. ಆದ್ದರಿಂದ ಧೈರ್ಯ ತಳೆದು ಬುದ್ಧಿವಂತಿಕೆ ಯಿಂದ ಪ್ರತಿಯೊಂದನ್ನೂ ಪರಾಂಬರಿಸಿ, ಚಂಚಲತೆಗೆ ಕುಪ್ರ ಸಿದ್ಧಳಾದ ಲಕ್ಷ್ಮಿಯು ನಿನ್ನನ್ನು ಒಂದು ಕ್ಷಣವೂ ಬಿಟ್ಟಿರದಂತೆ ಕಾರ್ಯಪ್ರವೃತ್ತನಾಗು.

"ಇಲ್ಲಿ ಬಂದಿರುವ ಅರಸರನ್ನು ನೋಡು. ಇವರು ಕುಲ ಪರಂಪರೆಯಿಂದ ನನಗೆ ಮಿತ್ರರು; ಇವರ ಪರಾಕ್ರಮ ಪ್ರಸಿದ್ಧ; ಇವರಲ್ಲಿ ಅಸೂಯೆಯಿಲ್ಲ, ಅಹಂಕಾರವಿಲ್ಲ, ಇವರು ವೈರಿಗಳನ್ನು ದಂಡಿಸಿದವರು. ನನ್ನ ಆಜ್ಞೆಯಂತೆ ಇವರೆಲ್ಲ ನಿನ್ನ ಸೇವೆಗೆ ಸಿದ್ಧರಾಗಿದ್ದಾರೆ. ನಿನ್ನ ಬಳಿ ಅಪಾರ ಸೇನಾಸಮುದ್ರವಿದೆ. ಸಾವಿರಾರು ಕುದುರೆಗಳು ಇದರ ತೆರೆಗಳು; ಮದ್ದಾನೆಗಳು ನಡುವಿನ ದ್ವೀಪಗಳು; ಶಸ್ತ್ರಾಸ್ತ್ರ ಕೋವಿದರಾದ ಸೈನಿಕರು ಮೊಸಳೆಗಳು. ಹೀಗಿರುವಾಗ ನೀನು ಈಗ ಜಗತ್ತಿಗೆ ಪೀಡಾಕರ ಪರ್ವತಗಳನ್ನು ಸದೆಬಡಿದ ಇಂದ್ರ ನಂತೆ, ವೈರಿಗಳನ್ನು ಗೆದ್ದು ನಿನ್ನ ಪರಾಕ್ರಮವನ್ನು ತೋರಿಸು. ಮೊದಲು ನೀನು ತುಂಡೀರ (ತೊಂಡೈಮಂಡಲ) ದ ಮೇಲೆ ದಾಳಿ ಮಾಡಿ ಅಲ್ಲಿ ಯುದ್ಧಕ್ಕೆ ಸಿದ್ಧತೆ ನಡೆಸಿ ರುವ ಚಂಪ (ಸಂಭವರಾಯ) ರಾಜನನ್ನು ಗೆಲ್ಲು. ಮತ್ತು

ಕಾಂಚಿಯು ಅಧಿಪತಿಯಾಗಿ, ಅಲಕಾಪುರಿಯನ್ನಾಳುವ ಕುಬೇರನಂತೆ ಪ್ರಜೆಗಳಿಗೆ ಸಂತಸ ನೀಡು. ಆ ಬಳಿಕ ನೀನು ಎಲ್ಲ ರಾಜರನ್ನು ಗೆದ್ದರೆ ತುರುಷ್ಕರಾಜನ ಬಲ ಮುರಿಯಲು ಸುಲಭವಾಗುವದು. ಮರದ ನೂರಾರು ಟೊಂಗೆಗಳನ್ನು ಸುಟ್ಟು ಬೂದಿ ಮಾಡಿದ ಕಾಡುಬೆಂಕಿಗೆ ಅದರ ಬೊಡ್ಡೆಯನ್ನು ಸುಡುವದು ಕಠಿಣವೆ? ಈ ತುರುಷ್ಕರಾಜನು ರಾಕ್ಷಸ ರಾಜನಾದ ರಾವಣನಂತೆ ದಕ್ಷಿಣದ ರಾಜ್ಯಗಳಲ್ಲೆಲ್ಲ ಹಾವಳಿ ಎಬ್ಬಿಸಿದ್ದಾನೆ. ನೀನಾದರೋ ರಾಮನಂತೆ ಮೂರು ಲೋಕಗಳ ತಾಪಕ್ಕೆ ಕೊನೆ ಹಾಕುವಂಥವನಾಗು."

ಸದ್ಗುಣಗಳಲ್ಲಿ ಅಗ್ರೇಸರನಾದ ಕಂಪಣನು ತಂದೆಯ ಉಪದೇಶವನ್ನೆಲ್ಲ ಶಿರಸಾವಹಿಸಿ ಅರಿತುಕೊಂಡನು. ಆಗ ಬುಕ್ಕರಾಯನು ಪರಮಾನಂದದಿಂದ ತನ್ನ ಮೈಮೇಲಿನ ಆಭರಣಗಳನ್ನು ತೆಗೆದು ಕಂಪಣನನ್ನು ಅಲಂಕರಿಸಿದನು. ಮತ್ತು "ಮಗೂ, ನಾಳೆಯೇ ನೀನು ವಿಜಯ ಯಾತ್ರೆಗೆ ಹೊರಡಲು ಸಿದ್ಧನಾಗು" ಎಂದು ಆದೇಶಿಸಿ ತನ್ನ ನಿವಾಸಕ್ಕೆ ಹೋದನು. ಆಗ ಸಾಯಂಕಾಲವಾಯಿತು. "ನಿನ್ನ ಭಾರವು ಕಡಿಮೆಯಾಗುವದು" ಎಂದು ಶೇಷನಿಗೆ ಹೇಳಲೋ ಎಂಬಂತೆ ಸೂರ್ಯನು ಪಾತಾಳಲೋಕವನ್ನು ಪ್ರವೇಶಿಸಿದನು. ಕಂಪಣನು ಸಂಧ್ಯಾಕಾಲದ ನಿತ್ಯವಿಧಿಗಳನ್ನು ಮುಗಿಸಿದನು ಮತ್ತು ವೈರಿಗಳನ್ನು ಸದೆಬಡಿಯುವ ಉತ್ಸಾಹ ತುಂಬಿಕೊಂಡು ಸಹಾಯಕ್ಕೆ ಬಂದಂತಹ ರಾಜರಿಗೆಲ್ಲ ತಂದೆಯ ಆದೇಶವನ್ನು ತಲುಪಿಸಿ ತನ್ನ ನಿವಾಸಕ್ಕೆ ಹೋಗಿ ವಿಶ್ರಮಿಸಿದನು.

## ನಾಲ್ಕನೆಯ ಸರ್ಗ

ಮರುದಿನ ರಾಜಕುಮಾರ ಕಂಪಣನು ಸೂರ್ಯೋದಯದ ಮೊದಲೇ ಎದ್ದು, ಪ್ರಾತರ್ವಿಧಿಗಳನ್ನೂ ಸ್ನಾನ-ಸಂಧ್ಯಾವಂದನೆ-ದೇವಪೂಜೆಗಳನ್ನೂ ಮುಗಿಸಿ, ಸೈನ್ಯವನ್ನು ವಿಜಯಯಾತ್ರೆಗಾಗಿ ಸಜ್ಜುಗೊಳಿಸಲು ಸೇನಾಧಿಕಾರಿಗಳಿಗೆ ಆದೇಶ ಕಳಿಸಿದನು. ಆಗ, ಅಮೃತಮಂಥನದ ಸಮಯದಲ್ಲಿ ಕ್ಷೀರಸಮುದ್ರದಿಂದ ಘೋರ್ಗರೆತ ಎದ್ದಂತೆ ರಣವಾದ್ಯಗಳು ದಶದಿಕ್ಕುಗಳಲ್ಲೂ ಮೊಳಗತೊಡಗಿದವು. ಆ ಮೊಳಗು ಆಕಾಶವನ್ನು ತುಂಬಿಕೊಂಡು, ಅದು, ಪ್ರಳಯಕಾಲದ ಚಂಡೀಶನ ಡಮರುವಿನ ಭೀಕರ ಗರ್ಜನೆಯೋ ಎಂಬ ಭ್ರಾಂತಿಯನ್ನು ನಿರ್ಮಿಸಿತು. ಅದು ಪರ್ವತಗಳ ಗುಹೆಗಳಿಂದ ಪ್ರತಿಧ್ವನಿಸಿತು ಹೆದರಿಕೆಯಿಂದ ಓಡಿಹೋಗಿ ಅವುಗಳಲ್ಲಿ ಆಶ್ರಯ ಪಡೆಯಬಯಸಿದ ಶತ್ರುರಾಜರನ್ನು ಬೆದರಿಸಿ ಅಲ್ಲಿಂದಲೂ ಓಡಿಸಲೋ ಎಂಬಂತೆ. ಅದು ಪಾತಾಳವನ್ನು ಸೇರಿದಾಗ ಶೇಷನು ಕಣ್ಣುಮುಚ್ಚಿಕೊಂಡು ಒಮ್ಮೆಲೇ ಕುರುಡನೂ ಕಿವುಡನೂ ಆಗಿಬಿಟ್ಟನು. (ಏಕೆಂದರೆ, ಅವನಿಗೆ ಕಣ್ಣುಗಳೇ ಕಿವಿಗಳು.)

ಕಂಪಣನ ಸೈನ್ಯದ ವಿವಿಧ ಅಂಗಗಳು ಸಜ್ಜಾದವು. ಆನೆಗಳ ಮೇಲೆ ರತ್ನಗಂಬಳಿ ಹೊದಿಸಲಾಯಿತು; ಕುದುರೆಗಳಿಗೆ ಜೀನು ಜೋಡಿಸಲಾಯಿತು; ಕಾಲಾಳುಗಳೆಲ್ಲ ಕವಚಧಾರಿಗಳಾದರು. ನೂರಾರು ಯುದ್ಧಗಜಗಳು ಮದಸುರಿಸುತ್ತ ಗುಂಪುಗೂಡಿದವು. ವಾಯುವೇಗದ ಸಾವಿರಾರು ಕುದುರೆಗಳು ಜೊಲ್ಲು ಸುರಿಸುತ್ತ ಕೆನೆದವು. ಖಡ್ಗ, ಕೃಪಾಣ,

ಬಿಲ್ಲು, ಭಲ್ಲೆ ಮೊದಲಾದ ಆಯುಧಗಳನ್ನು ಹಿಡಿದು, ನಾನಾ ದೇಶಗಳಿಂದ ಬಂದ ಲಕ್ಷಾವಧಿ ಕಾಲಾಳುಗಳು ಜಯಘೋಷ ಮಾಡಿದರು. ಎಲ್ಲ ಸಹಾಯಕರಾಜರು ಪೂರ್ಣಸನ್ನದ್ಧರಾಗಿ ಕಂಪಣರಾಯನ ದಾರಿ ನೋಡುತ್ತ ಹೆಬ್ಬಾಗಿಲಲ್ಲಿ ಕಾಯುತ್ತ ನಿಂತರು. ಆಕಾಶದಲ್ಲಿ ಎಲ್ಲೆಡೆ ಛತ್ರಗಳು ಕಾಣಿಸುತ್ತಿದ್ದವು; ಅವು ಸೇನೆಯೆಂಬ ನದಿಯಲ್ಲಿ ಅರಳಿದ ಕಮಲಗಳೋ ಜಯಲಕ್ಷ್ಮಿಯ ಆಟದ ಕನ್ನಡಿಗಳೋ ಎಂಬಂತೆ ಶೋಭಿಸಿದವು. ಆ ರಾಜರ ಕಿರೀಟಗಳೊಳಗಿನ ಮಾಣಿಕ್ಯಗಳ ಕಿರಣಗಳು ಬೆರೆತುಹೋದದ್ದರಿಂದ ಸೂರ್ಯನ ಕಿರಣಗಳಿಗೆ ಕೆಂಬಣ್ಣವನ್ನು ಬಿಡುವದು ಅಸಾಧ್ಯವಾಯಿತು. ಧ್ವಜಗಳು ಎತ್ತರವಾಗಿ ಹಾರಾಡುತ್ತಿದ್ದುದರಿಂದ ಸೂರ್ಯನ ರಥವನ್ನು ಸಾಗಿಸುವದು ಅರುಣನಿಗೆ ಕಠಿಣಸಾಧ್ಯವಾಯಿತು. ಕುದುರೆಗಳ ಕೆನೆತ, ಆನೆಗಳ ಆರ್ಭಟ ಮತ್ತು ರಣವಾದ್ಯಗಳ ಗರ್ಜನೆ ಇವುಗಳಿಂದ ಅಲ್ಲಿ ಅಪೂರ್ವವಾದ ಕೋಲಾಹಲವುಂಟಾಯಿತು.

### ಕಂಪಣನ ವಿಜಯಯಾತ್ರೆ

ರಾಜಪುರೋಹಿತರು ಶುಭಮುಹೂರ್ತವನ್ನು ನಿಶ್ಚಯಿಸಿಕೊಡುವದನ್ನೇ ಕಂಪಣನು ಕಾಯುತ್ತಿದ್ದನು. ಆಗ ಅವನ ಬಲಭುಜ ಅದುರಿ ಅವನು ಕ್ಷಿಪ್ರದಲ್ಲಿಯೇ ಅನುಭವಿಸಲಿರುವ ವೀರಶ್ರೀಯ ಆಲಿಂಗನವನ್ನು ಸೂಚಿಸಿತು. ಮಂತ್ರಗಳೊಡನೆ ಅರ್ಪಿಸಿದ ಆಹುತಿಗಳಿಂದ ಯಜ್ಞಾಗ್ನಿಯನ್ನು ಬೆಳೆಸುವಂತೆ, ವೇದವಿದ್ಯಾಪಾರಂಗತರಾದ ಬ್ರಾಹ್ಮಣರು ಅಥರ್ವಮಂತ್ರಗಳಿಂದ ಅವನನ್ನು ಆಶೀರ್ವದಿಸುತ್ತ ವಿಜಯ ಕೋರಿದರು.

ಅಷ್ಟರಲ್ಲಿ, ರಾಜಭವನದಿಂದ ಹೊರಬಂದ ಕಂಪಣನು ಸಜ್ಜಾಗಿ ನಿಂತ ತನ್ನ ಎತ್ತರ ಕುದುರೆಯನ್ನು ಕಂಡನು. ಅದು ವೇಗದಲ್ಲಿ ಗರುಡ, ಮನಸ್ಸು ಮತ್ತು ವಾಯುಗಳ ಗೆಳೆಯನಾಗಿತ್ತು. ತನ್ನ ವೇಗವನ್ನು ಪ್ರದರ್ಶಿಸಲು ಇರುವ ನೆಲದ ವಿಸ್ತಾರವು ಸಾಲದೋ ಎಂಬಂತೆ ಅದು ತನ್ನ ಖುರಗಳಿಂದ ನೆಲವನ್ನು ಅಗೆದು ಅಗಲ ಮಾಡುತ್ತಿತ್ತು. ಅದರ ಬಾಲದ ತುದಿಯಿಂದ ಬೀಸುವ ವಾಯುವು ಅದರ ಸೇವೆಯಲ್ಲಿ ತೊಡಗಿ, ಅದರಿಂದ ವೇಗದ ರಹಸ್ಯವನ್ನು ತಿಳಿದುಕೊಳ್ಳಲು ಶಿಷ್ಯತ್ವ ತಳೆದಂತಿತ್ತು. ತನ್ನ ವೇಗವನ್ನು ಹಿಡಿದಿಡಲು ಅದು ಕುತ್ತಿಗೆಯನ್ನು ಮೇಲೂ ಕೆಳಗೂ ಅಲುಗಾಡಿಸುತ್ತಿತ್ತು–ಹೀಗೆ ಅದು ಮುಂದಿರುವ ವಿಜಯಶ್ರೀಯನ್ನು ನಮಸ್ಕರಿಸುವಂತೆ ಕಾಣುತ್ತಿತ್ತು. ಅದರ ಖುರಪುಟಗಳು ಎಬ್ಬಿಸಿದ ಧೂಳು ಆಕಾಶವನ್ನೇ ಕವಿದು ಅದನ್ನು ನೆಲವನ್ನಾಗಿ ಮಾಡಿತು. ಅದರಿಂದ ಸೂರ್ಯನ ಕುದುರೆಗಳು (ನೆಲವಿಲ್ಲದ) ಅಂತರಾಳದಲ್ಲಿಯೇ ಸಂಚರಿಸುತ್ತವೆಯೆಂಬುದು ಸುಳ್ಳಾಯಿತು.

ಉತ್ಸಾಹವೇ ರೂಪ ತಾಳಿ ಬಂದಂಥ ಆ ಕುದುರೆಯನ್ನು ಏರಿದಾಗ ಕಂಪಣನಿಗೆ ಇಡಿಯ ಭೂಮಂಡಲವೇ ತನ್ನ ವಶವರ್ತಿಯಾದಂತೆನಿಸಿತು. ಆ ಕುದುರೆಯ ಮೇಲೆ ಕುಳಿತು ಅವನು ಹೊರಬಂದಾಗ ಸಹಾಯಕ ರಾಜರೆಲ್ಲ ಮೈ ಕುಗ್ಗಿಸಿ, ತಲೆ ತಗ್ಗಿಸಿ ಕೈಮುಗಿದರು. ಅವನನ್ನು ನೋಡಿ ಜಯಘೋಷ ಮಾಡುತ್ತ ಚೋಳ, ಕೇರಳ, ಪಾಂಡ್ಯ ಮೊದಲಾದ ದೇಶಗಳ ರಾಜರೆಲ್ಲ ಅವನ ಮುಂದೆ ವೇತ್ರಧಾರಿಗಳಾಗಿ ನಡೆಯತೊಡಗಿದರು. ಅವನು ಸಾಗುತ್ತಿದ್ದಾಗ,

ಪರ್ವತದ ಮೇಲೆ ಮಳೆ ಸುರಿಸುವ ಮೇಘಮಾಲೆಯಂತೆ ಪೌರನಾರಿಯರು ಅವನ ಮೇಲೆ ಅರಳನ್ನು ಸುರಿಸಿದರು.

ಹೀಗೆ ವೈರಿಗಳ ಹೃದಯ ಕಂಪಿಸುವ ಕಂಪಮಹೀಪಾಲನು ಮಲಯಾಚಲವಿದ್ದ ದಿಕ್ಕಿಗೆ ತಿರುಗಿದನು. ಮೂಡಣಗಾಳಿಯು ತನ್ನ ಹಿಂದೆ ಹಿಂದೆ ಕಾರ್ಮೋಡಗಳನ್ನು ಸೆಳೆದೊಯ್ಯುವಂತೆ ಆ ಅಪಾರಸೈನ್ಯ ಕಂಪಣನ ಹಿಂದೆ ಹಿಂದೆ ಸಾಗಿತು. ಆ ಸೈನ್ಯ ಎಬ್ಬಿಸಿದ ಧೂಳು ಆಕಾಶಕ್ಕೆ ಹೋದದ್ದರಿಂದ ಭೂಮಿಯ ಭಾರ ಸ್ವಲ್ಪ ಕಡಿಮೆಯಾಯಿತು. ಮತ್ತು ಅದರಿಂದ ಆ ಸೈನ್ಯದ ಭಾರವನ್ನು ಆದಿಶೇಷನು ಹೊರಲು ಸಾಧ್ಯವಾಯಿತು. ಆ ಧೂಳು ಸೂರ್ಯಗ್ರಹಣ-ಚಂದ್ರಗ್ರಹಣ ಗಳೆರಡನ್ನೂ ಉಂಟುಮಾಡಿತು - ವೈರಿಗಳ ಪ್ರತಾಪವೆಂಬುದೇ ಸೂರ್ಯ ಮತ್ತು ಅವರ ಕೀರ್ತಿಯೆಂಬುದೇ ಚಂದ್ರ. ಆ ಧೂಳು, ದಶದಿಕ್ಕುಗಳಲ್ಲಿ ಅಂಕುರಿಸತೊಡಗಿದ ಕಂಪಣನ ಕೀರ್ತಿಲತೆಗಳಿಗೆ ಗೊಬ್ಬರದ ರಾಶಿಯಾಯಿತು. ಆ ಧೂಳು ಮುಸುಕಿದ ನೆಪ ಮಾಡಿ ಸೂರ್ಯನು ಎಲ್ಲಿಯೋ ಓಡಿಹೋದನು; ಏಕೆಂದರೆ, ಜರುಗಲಿರುವ ಯುದ್ಧದಲ್ಲಿ ಮೃತರಾದ* ಯೋಧರು ಸ್ವರ್ಗಕ್ಕೆ ಹೋಗಲು ತನ್ನನ್ನು ಭೇದಿಸುವರೆಂಬ ಭಯ ಅವನಲ್ಲಿ ಹುಟ್ಟಿತ್ತು. ಸೂರ್ಯ ಕಿರಣಗಳನ್ನು ನುಂಗಲು ಹೋಗಿ ಬೆಂದುಹೋಯಿತೋ ಎಂಬಂತೆ ಆ ಧೂಳು ಸಮುದ್ರ ದಲ್ಲಿ ಮುಳುಗಿತು.

ಪ್ರಳಯಕಾಲದ ಸಪ್ತಸಮುದ್ರಗಳ ಸಂಗಮದಂತಿದ್ದ ಆ ಸೈನ್ಯವು, ಕೋಲಾಹಲಗೈಯುತ್ತ, ಜಯಗಳಿಸಲು

* ನೋಡಿರಿ: ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲಭೇದಿನೌ ।
ಪರಿವ್ರಾಟ್ ಯೋಗಯುಕ್ತಶ್ಚ ರಣೇ ಚಾಭಿಮುಖೇ ಹತಃ ॥

ಹೊರಟಿತು. ತುಂಗಭದ್ರೆಯ ಮೇಲಿಂದ ಬೀಸುವ ತಂಗಾಳಿ ಆ ಸೈನ್ಯದ ಪ್ರಯಾಣಕ್ಕೆ ಅನುಕೂಲವಾಗಿತ್ತು.

ಐದಾರು ದಿನಗಳ ಪ್ರಯಾಣದ ಬಳಿಕ ಕರ್ಣಾಟ ರಾಜ್ಯದ ಗಡಿಯನ್ನು ದಾಟಿ ಕಂಪಭೂಪಾಲನು ಕಂಟಕಾನನ (ಮುಳುಬಾಗಿಲು) ಪಟ್ಟಣವನ್ನು ತಲುಪಿದನು. ಅಲ್ಲಿ ಕೆಲ ದಿನಗಳನ್ನು ಕಳೆದು ಯೋಗ್ಯವೇಳೆಯಲ್ಲಿ ಅವನು ಚಂಪರಾಜನ ಮೇಲೆ ದಾಳಿ ಮಾಡಿದನು. ಅವನ ಸೈನ್ಯದ ಧೂಳಿನಿಂದ ಕ್ಷೀರತರಂಗಿಣೀ(ಪಾಲಾರ)ನದಿಯೂ ಚಂಪರಾಜನ ಕೀರ್ತಿಯೂ ಮಣ್ಣಾಗಿಬಿಟ್ಟವು. ಬಳಿಕ ಕಂಪಣನು ವಿರಿಂಚಿಪುರದ ಸಮೀಪವೇ ಪಾಲಾರನದಿಯ ದಂಡೆಯ ಮೇಲೆ ಸೈನ್ಯದೊಡನೆ ಬೀಡುಬಿಟ್ಟನು.

## ತಮಿಳಾಧಿಪನ ಸೋಲು

ಆ ಬಳಿಕ ಕಂಪರಾಯನು ತಮಿಳಾಧಿಪನ ಮೇಲೆ ಏರಿಹೋದನು. ಪ್ರಲಯಕಾಲದ ಚಂಡಮಾರುತದಿಂದ ಉಕ್ಕೇರುವ ಎರಡು ಸಮುದ್ರಗಳಂತೆ ಕರ್ನಾಟಕ ಮತ್ತು ತಮಿಳುನಾಡಿನ ಸೈನ್ಯಗಳು ಪರಸ್ಪರ ಎದುರಾದವು. ಮದ್ದಾನೆಗಳು ಮದ್ದಾನೆಗಳನ್ನು ಸಂಧಿಸಿದವು; ಕುದುರೆಗಳು ಕುದುರೆಗಳ ಮೇಲೇರಿಹೋದವು; ಕಾಲಾಳುಗಳು ಕಾಲಾಳುಗಳೊಡನೆ ಕಾದಿದರು. ಎರಡೂ ಕಡೆಯ ಸೈನಿಕರ ಸಿಂಹಗರ್ಜನೆಯನ್ನು ಸಹಿಸಲಾರದೆ ಅಷ್ಟದಿಗ್ಗಜಗಳು ಪುನಃ ಪುನಃ ಮೂರ್ಛೆಹೋದವು. ಅಲ್ಲಿ ಧೂಳಿನಿಂದ ಕತ್ತಲೆ ಕವಿದಿತ್ತು ಮತ್ತು ಆಯುಧಗಳ ಘರ್ಷಣೆಯಿಂದ ಎದ್ದ ಬೆಂಕಿಯ ಕಿಡಿಗಳು ಮಿಂಚುಹುಳಗಳಂತೆ ಮಿನುಗಿದವು. ಬಿಲ್ಲುಗಾರರು ಬಿಟ್ಟ ಚೂಪಾದ ಬಾಣಗಳು ಪರಸ್ಪರ ಸೀಳಿಕೊಂಡು ನೆಲಕ್ಕೆ

ಬಿದ್ದವು. ವೀರಯೋಧರ ಕೈಯಲ್ಲಿ ಮಿಂಚುವ ರಕ್ತಸಿಕ್ತ ಖಡ್ಗಗಳು ಹಸಿದ ಯಮನ ನಾಲಗೆಗಳಂತೆ ಹೊರಳಾಡಿದವು. ಎಲ್ಲೆಡೆ ಹರಿಯುತ್ತಿರುವ ಅಸಂಖ್ಯ ರಕ್ತನದಿಗಳಲ್ಲಿ, ಭಲ್ಲೆ-ಬಾಣ-ಖಡ್ಗಗಳಿಂದ ಕತ್ತರಿಸಿಬಿದ್ದ ಯೋಧಮುಖಗಳು ಕಮಲಗಳಂತೆ ಕಂಡವು. ಖಡ್ಗಗಳಿಂದ ತುಂಡಾಗಿಬಿದ್ದ ಯೋಧಬಾಹುಗಳು ಆನೆಸೊಂಡಿಲುಗಳಂತೆ ಕಾಣಿಸುತ್ತಿದ್ದವು; ಆದರೆ ಅವುಗಳನ್ನು ಹಾವುಗಳೆಂದು ಭ್ರಮಿಸಿ ಹದ್ದುಗಳು ಎತ್ತಿಕೊಂಡು ಹೋದವು; ರಾಕ್ಷಸಿಯರು ಆನೆಗಳ ಸೊಂಡಿಲುಗಳ ಮೇಲೆ ಕುಳಿತು, ಯೋಧರ ಮುಂಡಗಳಿಂದ ಹರಿಯುವ ರುಚಿಕರವಾದ ರಕ್ತವನ್ನು ಬಸಿ-ಬಸಿದು ಕುಡಿಯುತ್ತಿದ್ದರು. ವೈರಿಗಳ ಬಾಣಗಳಿಂದ ಗಜಕುಂಭಗಳ ಮೇಲೆ ನಿದ್ರಿಸಲ್ಪಟ್ಟ ವೀರಯೋಧರು ಕೂಡಲೇ ಸ್ವರ್ಗಸುಂದರಿಯರ ಕುಚಕುಂಭಗಳ ಮೇಲೆ ಎಚ್ಚೆತ್ತರು.*

ಆಗ ಕಂಪಣನ ಸೈನಿಕರಿಂದ ಸೋಲಿಸಲ್ಪಟ್ಟ ತಮಿಳಾಧಿಪನ ಸೇನೆಯು ಪಲಾಯನ ಮಾಡಿತು. ಸಿಕ್ಕಿದತ್ತ ದಿಕ್ಕಾಪಾಲಾಗಿ ಓಡುತ್ತಿದ್ದ ಕೆಲ ಸೈನಿಕರು ಹೆದರಿ ಕಂಗಾಲಾಗಿ ಆಯುಧಗಳನ್ನು ಚೆಲ್ಲಿಕೊಟ್ಟು ಇನ್ನೆಂದೂ ಕಾದಾಡುವದಿಲ್ಲವೆಂದು ಆಣೆ ಮಾಡಿದರು. ಇತರರು ಕರ್ನಾಟಕ ಸೈನಿಕರಿಂದ ಪಾರಾಗಲು, ಸತ್ತವರಂತೆ ಬಿದ್ದುಕೊಂಡರು; ಆದರೆ ನರಿಗಳು ಬಂದು ತಿನ್ನಬಹುದೆಂಬ ಅಂಜಿಕೆಯಿಂದ ಎದ್ದು ಪುನಃ ಓಡತೊಡಗಿದರು. ಇದನ್ನು ನೋಡಿ ಕರ್ನಾಟಕ ಸೈನಿಕರು ಬಿದ್ದು ಬಿದ್ದು ನಗತೊಡಗಿದರು. ಇನ್ನು ಕೆಲವರು ಬಿಸಿಲ್ಗುದುರೆಯನ್ನು ನೋಡಿ ನದಿಯೆಂದು ಭ್ರಮಿಸಿ ತಾವು

---

* ರಣರಂಗದಲ್ಲಿ ಮಡಿದ ವೀರರನ್ನು ಸ್ವರ್ಗಸುಂದರಿಯರು ಎತ್ತಿಕೊಂಡು ಹೋಗಿ ತಮ್ಮವರನ್ನಾಗಿ ಮಾಡಿಕೊಳ್ಳುತ್ತಾರಂತೆ.

ಒಗೆದು ಬೀಸಾಡಲು ಮರೆತ ಚರ್ಮದ ಗುರಾಣಿಗಳಿಂದ ದೋಣಿಗಳನ್ನು ಮಾಡಿ ದಾಟಲು ವ್ಯರ್ಥ ಪ್ರಯಾಸಪಟ್ಟರು. ಬೆದರಿ ಓಡುತ್ತಿದ್ದ ಕೆಲ ಸೈನಿಕರು ತಮ್ಮ ಹಿಂದೆಹಿಂದೆ ಓಡಿಬರುತ್ತಿದ್ದ ತಮ್ಮ ನೆರಳನ್ನು ನೋಡಿ ಕರ್ನಾಟಕ ಸೈನಿಕರೇ ಬೆನ್ನಟ್ಟಿ ಬರುತ್ತಿದ್ದಾರೆಂದು ಭ್ರಮಿಸಿ, ಹಿಂತಿರುಗಿ ಸಾಷ್ಟಾಂಗ ನಮಸ್ಕರಿಸಿ ಶರಣಾದರು.

ಹೀಗೆ ಸೋತ ತಮಿಳಾಧಿಪ ಸಂಭವರಾಯನು ರಾಜ ಗಂಭೀರ ದುರ್ಗಕ್ಕೆ ಹೋಗಿ ಅಡಗಿ ಕುಳಿತನು. ಕಂಪಣ ರಾಯನು ಸಂಭವರಾಯನ ರಾಜಧಾನಿಯಲ್ಲೇ ಬೀಡು ಬಿಟ್ಟು ಆ ದುರ್ಗಕ್ಕೆ ಮುತ್ತಿಗೆ ಹಾಕಿದನು. ಆ ಬೆಟ್ಟವೇ ಹೆದರಿಕೆ ಯಿಂದ ಚೀರುತ್ತದೆಯೋ ಎಂಬಂತೆ ಅದರ ಗುಹೆಗಳೆಲ್ಲ ಅವನ ರಣದುಂದುಭಿಗಳ ನಿನಾದವನ್ನು ಪ್ರತಿಧ್ವನಿಸಿದವು. ಆ ಬೆಟ್ಟದ ಮೇಲಿನ ಬಾವುಟಗಳು ಕಂಪಣನನ್ನು ಕೈಬೀಸಿ ಕರೆಯುತ್ತಿವೆಯೋ ಎಂಬಂತೆ ಹಾರಾಡುತ್ತಿದ್ದವು. ಪುನಃ ಘನಘೋರ ಯುದ್ಧ ಪ್ರಾರಂಭವಾಯಿತು. ಭೂಮಿಯ ಮೇಲೂ ಆಕಾಶದಲ್ಲಿಯೂ ಆಯುಧಗಳಿಂದ ಬೆಂಕಿಕಿಡಿಗಳು ಹಾರಲಾರಂಭಿಸಿದವು. ಕರ್ನಾಟಕ ಸೈನಿಕರ ಬಾಣಗಳು ಬೆಟ್ಟದ ಮೇಲಿನ ಗೋಡೆಗಳಿಂದ ಉರುಳಿಸಿದ ತಮಿಳು ಸೈನಿಕರ ರುಂಡಗಳು ರಣದೇವಿಯ ಆಟದ ಚೆಂಡುಗಳೋ ಎಂಬ ಭ್ರಾಂತಿ ಮೂಡಿಸಿದವು. ಕರ್ನಾಟಕ ಬಿಲ್ಲುಗಾರರು ಬಿಟ್ಟ ಬೆಂಕಿಯುಗುಳುವ ಬಾಣಗಳಿಂದ ಬೆಟ್ಟದ ಮೇಲಿನ ಮನೆಗಳು ಉರಿಯಲಾರಂಭಿಸಿದವು. ಆ ಜ್ವಾಲೆಗಳ ಮೂಲಕ ಬೆಟ್ಟವು ಕಂಪಣನಿಗೆ ಆರತಿಯೆತ್ತಿ ಅವನ ವಿಜಯೋತ್ಸವ ವನ್ನು ಆಚರಿಸುವಂತೆ ತೋರಿತು.

ಕಂಪಣನ ಮುತ್ತಿಗೆಯಿಂದ ಬೆಟ್ಟದ ಮೇಲಿದ್ದವರಿಗೆ ಓಡಿಹೋಗುವದು ಅಸಾಧ್ಯವಾಯಿತು. ಆಗ ಸರ್ಪವು ಹುತ್ತದಿಂದ ಭುಸುಗುಟ್ಟುತ್ತ ಹೊರಬರುವಂತೆ, ಸಂಭವ ರಾಯನು ಕಡುಕೋಪದಿಂದ ಬಿಚ್ಚುಗತ್ತಿಯನ್ನು ಬೀಸುತ್ತ ಕೋಟೆಯಿಂದ ಹೊರಬಂದನು. ಕಂಪಣನ ಅನೇಕ ವೀರ ಸೈನಿಕರು ಸಂಭವರಾಯನೊಡನೆ ಹೋರಾಡಲು ತವಕದಿಂದ ಮುಂದೆ ಬಂದರು. ಆದರೆ ಸಿಂಹವು ಆನೆಯಮೇಲೆ ಏರಿ ಹೋಗುವಂತೆ ಕಂಪಣನು ತಾನೇ ಸ್ವತಃ ಸಂಭವರಾಯನ ಮೇಲೇರಿ ಹೋದನು. ಇಬ್ಬರಲ್ಲೂ ಭಯಂಕರ ಹೋರಾಟ ನಡೆಯಿತು. ದೇವತೆಗಳೂ ಕುತೂಹಲದಿಂದ ವೀಕ್ಷಿಸ ತೊಡಗಿದರು. ಕಂಪಣನ ಹರಿತವಾದ ಖಡ್ಗದಲ್ಲಿ ಸಂಭವ ರಾಯನ ಪ್ರತಿಬಿಂಬ ಮೂಡಿತು. ಆಗ ಆ ಖಡ್ಗವು ಅಪ್ಸರೆ ಯರಿಗೆ ಸಂಭವರಾಯನನ್ನು ಪತಿಯನ್ನಾಗಿ ನೀಡಲು ಅವನನ್ನು ಗರ್ಭದಲ್ಲಿ ಧರಿಸಿದೆಯೋ ಎಂಬಂತೆ ಕಂಡಿತು. ಶೀಘ್ರದಲ್ಲೇ ಕಂಪಣನು ಸಂಭವರಾಯನನ್ನು ಸ್ವರ್ಗಕ್ಕೆ ಕಳಿಸಿದನು.

ಹೀಗೆ ಕಂಪಣನು ಸಂಭವರಾಯನನ್ನು ಯುದ್ಧದಲ್ಲಿ ಕೊಂದು ತಂದೆಯ ಮೊದಲೇ ಅಪ್ಪಣೆ ಮಾಡಿದಂತೆ ಆ ಪ್ರದೇಶವನ್ನು ಆಳತೊಡಗಿದನು. ಅವನ ಜಯಪ್ರಶಸ್ತಿಯು ಕಾಂಚೀನಗರದಲ್ಲಿ ಸ್ಥಿರವಾಯಿತು. ಅವನ ಆಳ್ಕೆಯು ತುಂಡೀರಭೂಮಂಡಲದ ಇತಿಹಾಸದಲ್ಲಿ ನ್ಯಾಯದ ಮತ್ತು ಸಮೃದ್ಧಿಯ ಅಧ್ಯಾಯವನ್ನೇ ಪ್ರಾರಂಭಿಸಿತು.

# ಐದನೆಯ ಸರ್ಗ

ಮರತಕ (ಕಾಂಚಿ)ವೆಂಬ ಹೆಸರುಳ್ಳ ಆ ಪಟ್ಟಣದಲ್ಲಿ ಕಂಪಣನು ಸ್ಥಿರವಾಗಿ ನೆಲೆಸಿ ಸುಖದಿಂದ ರಾಜ್ಯವಾಳ ತೊಡಗಿದನು. ವೈರಿಮರ್ದನನೂ ಶರಣಾಗತರಿಗೆ ಆನಂದ ದಾಯಕನೂ ಸಜ್ಜನರ ಮನಸ್ಸನ್ನು ಸಂತೋಷಗೊಳಿಸು ವವನೂ ಆದ ಕಂಪಣನೆಂದರೆ ಭೂಲೋಕಕ್ಕೆ ಅವತರಿಸಿದ ವಿಷ್ಣುಪರಮಾತ್ಮನೇ ಎಂದು ಪ್ರಜೆಗಳು ನಂಬಿದರು. ಅವನ ಪೌರುಷ–ಪರಾಕ್ರಮಗಳು ಎಲ್ಲೆಡೆ ಪ್ರಖ್ಯಾತವಾಗಿದ್ದವು. ಅವನ ಕಾರ್ಯಗಳು ಯಾವಾಗಲೂ ಸಿದ್ಧಿಸುತ್ತಿದ್ದವು. ಸಾಮ-ದಾನ-ದಂಡ-ಭೇದಗಳೆಂಬ ನಾಲ್ಕು ಉಪಾಯಗಳಲ್ಲಿ ಅವನು ಸಾಮೋಪಾಯವನ್ನೇ ಬಳಸುತ್ತಿದ್ದನು. ಅವನು ಬುದ್ಧಿ ವಂತನೂ ರಾಜನೀತಿಪ್ರವೀಣನೂ ಆಗಿದ್ದನು. ಉದಯಿಸಿದ ಸೂರ್ಯನು ಎಲ್ಲವನ್ನೂ ಅರಿಯುವಂತೆ ಕಂಪಣನು ತನ್ನ ಗುಪ್ತಚಾರರ ಮೂಲಕ ತನ್ನ ಮತ್ತು ವೈರಿಗಳ ರಾಜ್ಯದ ಘಟನೆಗಳನ್ನೆಲ್ಲ ಅರಿಯುತ್ತಿದ್ದನು. ಅವನು ವಿಧಿಸಿದ ತೆರಿಗೆಗಳು ಪ್ರಜೆಗಳಿಗೆ ಭಾರವಾಗಿರಲಿಲ್ಲ. ಪರಿಣಾಮವಾಗಿ ಅವರು ಸಂತುಷ್ಟರಾಗಿದ್ದರು. ಭೂದೇವಿಯು ಸಹ ಸಂತೋಷ ದಿಂದ ಪುಳಕಿತಳೋ ಎಂಬಂತೆ ಸಸ್ಯಸಮೃದ್ಧಿಯಿಂದ ತುಂಬಿ ಹೋಗಿದ್ದಳು. ಭೂಮಿಯು ಶಕ್ತಿಶಾಲಿ, ಮನೋಹರ, ರತ್ನಖಚಿತ ಮತ್ತು ದಾನಗುಣಪೂರ್ಣ ಅವನ ಕೈಗಳಲ್ಲಿ ಆಶ್ರಯ ಪಡೆದು ಶೇಷನ ಭಾರವನ್ನು ಕಡಿಮೆ ಮಾಡಿದಳು. ಅವನ ಸಭಾಂಗಣವು ಮದ್ದಾನೆಗಳಿಂದಲೂ ಸಾಮಂತರಾಜ ರಿಂದಲೂ ತುಂಬಿಹೋಗಿತ್ತು. ಆ ಆನೆಗಳು ಸುರಿಸುವ ಮದೋದಕದಿಂದ ಆ ಅಂಗಳವೆಲ್ಲ ಕೆಸರಾದರೆ, ಸಾಮಂತ

ರಾಜರ ಆಭರಣಗಳು ಪರಸ್ಪರ ತಿಕ್ಕಿ ಬಿದ್ದಂತಹ ರತ್ನಗಳ ಪುಡಿಯು ಆ ಕೆಸರನ್ನು ಒಣಗಿಸಿಬಿಡುತ್ತಿತ್ತು. ಪ್ರತಿನಿತ್ಯವೂ ಇತರ ರಾಜರು ವೈರಭಾವನೆಯನ್ನು ತೊರೆದು ಬಂದು ಕಂಪಣನ ಪಾದಪೀಠಕ್ಕೆ ತಮ್ಮ ಹಣೆಯನ್ನು ತಿಕ್ಕುತ್ತಿದ್ದರು. ಅದರಿಂದ ಜನ್ಮತಃ ಅವರ ಹಣೆಯ ಮೇಲಿದ್ದ ಅಕ್ಷರಗಳನ್ನು ಅಳಿಸಿ ಹೊಸ ಅಕ್ಷರಗಳನ್ನು ಬರೆದಿದೆಯೋ ಎಂಬಂತೆ ಅವರು ಭಾಗ್ಯಶಾಲಿಗಳಾಗುತ್ತಿದ್ದರು. ಮಗಧ, ಮಾಲವ, ಸೇವುಣ, ಸಿಂಹಲ, ದ್ರಮಿಲ, ಕೇರಲ, ಗೌಡ ಮೊದಲಾದ ರಾಜ್ಯಗಳ ಅರಸರು ಅವನಿಗೆ ತಮ್ಮ ಸೇವೆ ಸಲ್ಲಿಸಲು ದಾರಿ ಕಾಯುತ್ತಿದ್ದರು. ಸಿಂಹಾಸನದಲ್ಲಿ ಕುಳಿತ ಕಂಪಣನ ಎಡ-ಬಲಗಳಲ್ಲಿ ಸುಂದರಿಯರು ಚಾಮರಗಳನು ಬೀಸುತ್ತಿದ್ದರು. ವಂದಿ-ಮಾಗಧರು ಜಯಘೋಷ ಗೈಯುತ್ತಿದ್ದರು. ಆಸ್ಥಾನದಲ್ಲಿ ನಡೆಯುತ್ತಿದ್ದ ಸತ್ಕವಿಗಳ ಕಾವ್ಯವಾಚನ ಅವನನ್ನು ಸಂತುಷ್ಟಗೊಳಿಸುತ್ತಿತ್ತು. ಗಾಯಕಿಯರು ವೀಣೆಯ ಜೊತೆ ಹಾಡಿ, ಮತ್ತು ನರ್ತಕಿಯರು ನರ್ತಿಸಿ, ಅವನ ಮೆಚ್ಚುಗೆ ಗಳಿಸಿದರು.

ಕಂಪಣನು ಅರಣ್ಯಗಳಲ್ಲಿ ಸಂಚರಿಸಿ, ಕ್ರೂರಪ್ರಾಣಿಗಳನ್ನು ಬೇಟೆಯಾಡಿ, ಪ್ರಜೆಗಳ ಸುಖಕ್ಕೆ ಕಾರಣನಾದನು. ಬೇಸಿಗೆ, ಮಳೆಗಾಲ ಮತ್ತು ಚಳಿಗಾಲಗಳಲ್ಲಿ ಅವನು ರಾಣೀವಾಸದ ಸುಂದರಿಯರೊಡನೆ ರತಿಕ್ರೀಡೆಯ ಸುಖವನ್ನನುಭವಿಸಿದನು.

# ಆರನೆಯ ಸರ್ಗ

**ಜಲಕ್ರೀಡೆಯ ವರ್ಣನೆ:**

ಅಪ್ಸರೆಯರೊಡನೆ ಇಂದ್ರನು ನಂದನವನಕ್ಕೆ ಹೋದಂತೆ ಕಂಪಣನು ಸುಂದರಿಯರೊಡನೆ ತನ್ನ ಹೂದೋಟಕ್ಕೆ ತೆರಳಿದನು. ಕೊಳದ ಗುಂಟ ಅವನನ್ನು ಹಿಂಬಾಲಿಸುತ್ತಿದ್ದ ಆ ಲಲನೆಯರು ಸಂತಸದಿಂದ ಹೀಗೆ ಮಾತನಾಡಿಕೊಳ್ಳುತ್ತಿದ್ದರು:-

"ಸುಂದರಿ, ಹಿಂದಿನಿಂದ ಸಾವಕಾಶ ಬಾ. ಇಲ್ಲವಾದರೆ ಮುಂದೆ ಹೋದವರ ಕೊರಳಹಾರಗಳೊಳಗಿಂದ ಬಿದ್ದು ಒಡೆದ ಮುತ್ತುಗಳನ್ನು ತುಳಿದು ಕಾಲಿಗೆ ಗಾಯ ಮಾಡಿಕೊಳ್ಳುವಿ"

"ಕಮಲಮುಖಿ, ನಿನ್ನ ಕಾಲ್ಗೆಜ್ಜೆಯ ನಾದದಿಂದ ಕೊಳದೊಳಗೆ ನಿದ್ದೆ ಹೋದ ಹಂಸಗಳನ್ನು ಎಚ್ಚರಿಸಬೇಡ. ಅವು ಎಚ್ಚರಗೊಂಡರೆ ನಿನ್ನ ಪಾದಗಳನ್ನು ಕಮಲಗಳೆಂದು ಭಾವಿಸಿ ನಿನ್ನ ಕಾಲುಗಳನ್ನು ಮುತ್ತಿಕೊಳ್ಳುವವು; ಆಗ ನಿನ್ನ ವೇಗಕ್ಕೆ ತಡೆ ಬೀಳುವದು"

"ಚಂದ್ರಮುಖಿ, ಚಂದ್ರಕಾಂತ ಶಿಲೆಗಳಿಗೆ ಡಿಕ್ಕಿ ಹೊಡೆಯಬಹುದೆಂದು ನೀನು ಒಂದು ಹೆಜ್ಜೆ ಸಹ ಮುಂದಿಡುತ್ತಿಲ್ಲ. ಆದರೆ ನಿನ್ನ ಮುಖವು ಈಗಾಗಲೇ ಅವುಗಳಲ್ಲಿ ಸೇರಿಕೊಂಡು ಪ್ರತಿಬಿಂಬವಾಗಿ ಹೊಳೆಯುತ್ತಿದೆ."

''ಮುಗ್ಧೆ, ಯಾಕಿಷ್ಟು ಸಾವಕಾಶ ನಡೆಯುತ್ತಿರುವಿ? ಮುಂದೆ ಹೋದ ನಿನ್ನ ಪ್ರಿಯಕರನು ಇತರರೊಡನೆ ಲಲ್ಲೆಗರೆಯಲಿಕ್ಕಿಲ್ಲವೆ? ಈ ತೋಟದಲ್ಲಿ ಹೂಗಳ ಪರಾಗದಿಂದ ಹಗ

ಲಲ್ಲಿ ಸಹ ಕತ್ತಲೆ ಕವಿಯುತ್ತದೆ ಮತ್ತು ಆದರಿಂದ ಕದ್ದು ಎಲ್ಲಗರೆಯಲು ಅವಕಾಶ ಲಭಿಸುತ್ತದೆಯೆಂಬುದು ನಿನಗೆ ತಿಳಿಯದೆ?"

"ಗೆಳತಿ, ನೀನು ವೇಗವಾಗಿ ನಡೆಯುವ ಕಾರಣ ನನಗೆ ಗೊತ್ತು. ಪ್ರಿಯಕರನಿಗಿಂತ ಮುಂದೆ ಹೋಗಿ, ಹಿಂತಿರುಗಿ ಅವನನ್ನು ನೋಡುವ ಬಯಕೆ ನಿನಗೆ. ಆದರೆ ಪ್ರೇಯಸಿಯರ ಮನಸ್ಸಿನಲ್ಲಿ ಪ್ರಿಯಕರನು ಯಾವಾಗಲೂ ಎದುರಿಗೇ ಇರುತ್ತಾನೆಂಬುದು ನಿನಗೆ ಗೊತ್ತಿಲ್ಲವೆ?"

(ಇದರ ಮುಂದಿನ ೪೪ ಶ್ಲೋಕಗಳು ಲಭ್ಯವಿಲ್ಲ)

ಜಲಕ್ರೀಡೆಯಲ್ಲಿ ತೊಡಗಿದ ಕಂಪಣನು ಕ್ರೀಡಾಸರೋವರದೊಳಗಿನ ಒಂದು ಕಮಲಕ್ಕೆ ನೀರಿನಿಂದ ಹೊಡೆದಾಗ, ಕಮಲಮುಖಿಯೊಬ್ಬಳಿಗೆ (ತನ್ನ ಮುಖಕ್ಕೆ ಹೊಡೆಯಲಿಲ್ಲವೆಂದು) ಅಸೂಯೆಯಿಂದ ಸಿಟ್ಟೇ ಬಂದಿತು. ಅವನು ನೀರೊಳಗೆ ಇನ್ನೊಬ್ಬಳ ತೊಡೆಯನ್ನು ಚಿವುಟಿದಾಗ ಆಕೆ ಮೀನು ಕಚ್ಚಿತೆಂದು ಹೆದರಿದವಳಂತೆ ಎಲ್ಲರ ಎದುರಿಗೇ ಅವನನ್ನು ಅಪ್ಪಿಕೊಂಡಳು. ನೀರೊಳಗಿದ್ದ ಆ ಲಲನೆಯರ ಸ್ತನಗಳ ಮೇಲಿನ ಚಂದನ ಲೇಪವು ತೊಳೆದುಹೋಗಿ ಅಲ್ಲಿ ಕಮಲಗಳ ಪರಾಗದ ಲೇಪ ಹತ್ತಿಕೊಂಡಿತು. ಜಲಕ್ರೀಡೆಯಿಂದ ಸಮಾಧಾನ ಹೊಂದಿದ ಕಂಪಣನು ಕ್ರೀಡೆಯನ್ನು ನಿಲ್ಲಿಸಲು ಬಿನ್ನವಿಸಿದರೂ ಅವರು ನಿಲ್ಲಿಸಲಿಲ್ಲ. ಅಷ್ಟೊಂದು ಉತ್ಸಾಹ ಅವರಲ್ಲಿ ತುಂಬಿತ್ತು. ಬಹಳ ಸಮಯದ ಬಳಿಕ ದಣಿವಾದ್ದರಿಂದ ಅವರು ಜಲಕ್ರೀಡೆ ನಿಲ್ಲಿಸಿದರು. ಅವರೊಡನೆ ಕಂಪಣನು ನಿವಾಸಕ್ಕೆ ತೆರಳಿ ಶಿವನ ಪೂಜೆ ಮುಗಿಸಿ ರಾಜಕಾರ್ಯದಲ್ಲಿ ಉಳಿದ ಸಮಯವನ್ನು ಕಳೆದನು.

# ಏಳನೆಯ ಸರ್ಗ

ಸಾಯಂಕಾಲವಾದಂತೆ ಸೂರ್ಯನು ಪಡುವಣದಿಕ್ಕಿಗೆ ಹೊರಳಿದನು. ಕಮಲಗಳನ್ನು ಅರಳಿಸಲು ತನ್ನ ಬಿಸಿಯು ವ್ಯಯವಾದ್ದರಿಂದ ವಾಡವಾಗ್ನಿಯಿಂದ ಅದನ್ನು ತುಂಬಿ ಕೊಳ್ಳಲೋ ಎಂಬಂತೆ ಸೂರ್ಯನು ಸಮುದ್ರದಲ್ಲಿ ಮುಳುಗಿ ದನು. ಆಗ ಕಮಲಗಳು ಮುಚ್ಚಿಕೊಂಡವು. ಅವು ಸೂರ್ಯನು ಬೇಗ ಮರಳಲೆಂದು ಕೈಮುಗಿದು ಬೇಡಿಕೊಳ್ಳುತ್ತಿವೆಯೋ ಎಂದು ತೋರುತ್ತಿತ್ತು. ವಿರಹವ್ಯಥೆಯಿಂದ ನರಳುವ ಚಕ್ರವಾಕಜೋಡಿಗಳ ಸ್ಥಿತಿ ಕರುಣಾಜನಕವಾಗಿತ್ತು. ಕಾಲ ವೆಂಬ ಆನೆಯು ಹಗಲೆಂಬ ಮರವನ್ನು ಕಿತ್ತೆಸೆದಾಗ ಉಳಿದ ಕೆಲ ರೆಂಬೆಗಳೋ ಎಂಬಂತೆ, ಸೂರ್ಯನು ಮುಳುಗಿದ್ದರೂ ಅವನ ಕೆಲ ಕಿರಣಗಳು ಆಗಸದಲ್ಲಿ ತೋರುತ್ತಿದ್ದವು. ಸೂರ್ಯ ಬಿಂಬವು ಸಮುದ್ರದ ತೆರೆಗಳ ಮೇಲೆ ಹೊರಳಾಡುತ್ತಿತ್ತು. ಮೀನುಗಳು ಅವು ಹಣ್ಣಿನ ತುಂಡುಗಳೆಂದು ಭ್ರಮಿಸಿ ನೆಕ್ಕ ತೊಡಗಿದವು. ಪ್ರಿಯಕರರಿಂದ ಬೇರೆಯಾದ ಪ್ರೇಯಸಿಯರ ವಿರಹವೇದನೆ ಹೆಚ್ಚಾಗತೊಡಗಿತು. ಸಂಧ್ಯೆಯು ಹಗಲಿನ ವೇಷ ಕಳಚಿ ರಾತ್ರಿಯ ವೇಷಧರಿಸುವ ಕಾಲವೆಂಬ ನಟನ ರಂಗಮಂಚದ ಕೆಂಬಣ್ಣದ ತೆರೆಯಂತೆ ಕಂಗೊಳಿಸಿತು.

ಕತ್ತಲೆ ಸಾವಕಾಶ ಕವಿಯತೊಡಗಿತು. ಮೊದಲು ಸುತ್ತಲಿನ ಗಿಡಮರಗಳು, ಅನಂತರ ಆಕಾಶ, ಬಳಿಕ ದಿಕ್ಕು ಗಳು ಕಾಣಿಸದಂತಾದವು. ಜನರ ಕಣ್ಣು ಕುರುಡಾದವು. ಹಗಲಿನಲ್ಲಿ ಸೂರ್ಯನ ಬೇಗೆಯಿಂದ ಬೆಂದ ಆಕಾಶದ ಮೇಲೆ ಮೂಡಿದ ಬೆವರಿನ ಹನಿಗಳೋ ಎಂಬಂತೆ ನಕ್ಷತ್ರಗಳು ಮಿನುಗತೊಡಗಿದವು. ಆಗ ಕೆಲ ಜನರು ತಿಳಿದದ್ದು ಹೀಗೆ:

"ಕಾಲನು ರೈತನು; ಆಗಸವೇ ಹೊಲ; ನಕ್ಷತ್ರಗಳೇ ಬೀಜಗಳು ಮತ್ತು ಬರುವ ಪೈರೆಂದರೆ ಬೆಳದಿಂಗಳು." ಇನ್ನು ಕೆಲವರು ಭಾವಿಸಿದ್ದು ಹೀಗೆ:-"ಆಕಾಶ ಒಂದು ಮರ; ಕೆಂಬಣ್ಣದ ಸಂಧ್ಯೆ ಆದರಲ್ಲಿ ಕಾಣಿಸಿಕೊಂಡ ಎಳೆಚಿಗುರು; ಕತ್ತಲೆಯು ಬೆಳೆದ ಎಲೆ; ದಿಕ್ಕುಗಳು ಟಿಸಿಲುಗಳು ಮತ್ತು ಆ ಟಿಸಿಲುಗಳಲ್ಲಿ ಮೂಡಿದ ಮೊಗ್ಗೆಗಳೇ ನಕ್ಷತ್ರಗಳು."

ಆಗ ಚಂದ್ರೋದಯದ ಲಕ್ಷಣಗಳು ಕಂಡವು. ಚಂದ್ರನನ್ನು ಧರಿಸಿದ ಮೂಡಣದಿಕ್ಕು ಗರ್ಭಿಣಿಯಂತೆ ಕಾಣಿಸಿತು. ಮಹಾಪ್ರತಾಪಶಾಲಿಯಾದ ರಾಜನು ದರ್ಪದಿಂದ ರಾಜ್ಯವಾಳಿ ಗತಿಸಿದ ಬಳಿಕ ಪಟ್ಟಕ್ಕೆ ಬಂದ ಹೊಸರಾಜನು ತೆರಿಗೆಗಳನ್ನು ತಗ್ಗಿಸಿ ಪ್ರಜೆಗಳನ್ನು ಸಂತುಷ್ಟಗೊಳಿಸುವಂತೆ, ಸೂರ್ಯನು ಮುಳುಗಿದ ಬಳಿಕ ಚಂದ್ರನು ತನ್ನ ತಂಪಾದ ಕಿರಣಗಳಿಂದ ಜಗತ್ತಿಗೆ ಆನಂದ ನೀಡಿದನು.

ಕಂಪಣರಾಯನು ಸಂಧ್ಯಾಕಾಲದ ಪೂಜೆ ಮೊದಲಾದವುಗಳನ್ನು ಮುಗಿಸಿ ತನ್ನ ಬಳಿಯೇ ಇದ್ದ ಒಲವಿನ ರಾಣಿಯಾದ ಗಂಗಾದೇವಿಗೆ ಹೀಗೆ ಬಿನ್ನವಿಸಿದನು: "ಕಮಲಮುಖಿ, ಈ ಸಂತಸದ ರಾತ್ರಿಯನ್ನು ನಿನ್ನ ರಸಭರಿತ ವರ್ಣನೆಯಿಂದ ಸತ್ಕರಿಸು. ನಿನ್ನ ಅಮೃತಪ್ರಾಯವಾದ ವಾಣಿಯನ್ನು ಸವಿಯಲು ನನ್ನ ಕಿವಿಗಳು ಹಾತೊರೆಯುತ್ತಿವೆ." ಈ ಮಾತನ್ನು ಕೇಳಿ ಅವಳು ನಸುನಕ್ಕು ನಾಚಿಕೆಯಿಂದ ಸ್ವಲ್ಪ ತಲೆತಗ್ಗಿಸಿದಳು. ಮತ್ತು ರಸಭರಿತವಾದ ಮಾತುಗಳಿಂದ ಆ ಸುಂದರ ಸನ್ನಿವೇಶವನ್ನು ಬಣ್ಣಿಸತೊಡಗಿದಳು:-"ಅರಸರಲ್ಲಿ ಚಂದ್ರನಾಗಿರುವವನೆ, ಈ ರಾತ್ರಿಯ ಚೆಲುವನ್ನು ನೋಡು. ಮನ್ಮಥನಿಗೆ ಪೋಷಕವಾಗಿ ಸುಗಂಧಪೂರ್ಣ ಮಂದಮಾರುತ ಬೀಸುತ್ತಿದೆ; ಕಣ್ಣಿಗೆ ಹಬ್ಬವನ್ನುಂಟುಮಾಡುವ ಬೆಳದಿಂಗಳು

ಹಬ್ಬುತ್ತಲಿದೆ. ಅದೋ ನೋಡು, ಚಂದ್ರನು ಮೂಡಣ ದಿಕ್ಕನ್ನು ಪ್ರೇಮಾತಿಶಯದಿಂದ ತಬ್ಬಿಕೊಳ್ಳುತ್ತಿದ್ದಾನೆ. ಮತ್ತು ಕತ್ತಲೆಯೆಂಬ ಅವಳ ಹೆರಳನ್ನು ಉಗುರುಗಳಂತಿರುವ ತನ್ನ ಕಿರಣಗಳಿಂದ ಬಿಡಿಸುತ್ತಿದ್ದಾನೆ. ಇತ್ತ ನೋಡು, ಚಂದ್ರನು ಮೂಡಣ ಬೆಟ್ಟದ ಮೇಲೇರಿ ಆಗಸವೆಂಬ ಪಾತ್ರೆಯೊಳಗಿನ ಕತ್ತಲೆಯನ್ನು ತನ್ನ ಕಿರಣಗಳ ಮೂಲಕ ಹೀರಿಕೊಳ್ಳುತ್ತಿದ್ದಾನೆಯೋ ಎಂದು ಕಾಣಿಸುತ್ತಿದೆ. ಚಂದ್ರನ ಹಸ್ತಕೌಶಲ್ಯ ನೋಡು–ಅವನು ಉದಯರಾಗವೆಂಬ ಬೆಂಕಿಯಲ್ಲಿ ಕತ್ತಲೆಯೆಂಬ ಕಬ್ಬಿಣವನ್ನು ಹಾಕಿ ಬೆಳದಿಂಗಳೆಂಬ ಬೆಳ್ಳಿಯನ್ನು ಉತ್ಪಾದಿಸುತ್ತಿದ್ದಾನೆ. ಎಂತಹ ಗಂಡಸು ಈ ಚಂದ್ರ! ತನ್ನ ಕಿರಣಗಳೆಂಬ ಕೈಗಳಿಂದ ಒಂದೆಡೆ ಬೆಳದಿಂಗಳೆಂಬ ಶುಭ್ರ ರೇಷ್ಮೆಯುಟ್ಟು ಮೆರೆಯುತ್ತಿರುವ ಮೂಡಣ ದಿಗ್ದೇವಿಯನ್ನು ಅಪ್ಪಿಕೊಂಡರೆ, ಇನ್ನೊಂದೆಡೆ ಕುಮುದ್ವತಿ(ರಾತ್ರಿಕಮಲ)ಯನ್ನು ಪ್ರೀತಿಯಿಂದ ಚುಂಬಿಸುತ್ತಾನೆ. ಇದನ್ನು ನೋಡಿದಾಗ, ನೀನೇ ಹೇಳು, ಗಂಡಸರನ್ನು ನಂಬಬಹುದೇ? ತದ್ವಿರುದ್ಧ, ಪತಿವ್ರತೆಯರಿಗೆ ಆದರ್ಶಪ್ರಾಯಗಳಾದ ಈ ಕಮಲಗಳನ್ನು ನೋಡು. ಚಂದ್ರನು ಅವುಗಳನ್ನು ತನ್ನ ಕೋಮಲ ಕೈಗಳಿಂದ ಎಷ್ಟೇ ಸವರಿದರೂ ಅವು ಅರಳುವ ಲಕ್ಷಣ ತೋರಿಸುತ್ತಿಲ್ಲ! ಈ ಚಂದ್ರನು ಅಮಾವಾಸ್ಯೆಯ ದಿನ ಸೂರ್ಯನಲ್ಲಿ ಸೇರಿಬಿಡುತ್ತಾನಷ್ಟೇ. ಆಗ ಸೂರ್ಯನಿಂದ ಪಡೆದ ಬೇಗೆಯಿಂದಲೇ ಅವನು ವಿರಹಿಗಳನ್ನು ಬೇಯಿಸುತ್ತಾನೆಂಬುದನ್ನು ಅರಿತುಕೊ. (ಇಲ್ಲಿ ಕೊನೆಯ ಶ್ಲೋಕಗಳು ದೊರೆತಿಲ್ಲ.)

## ಎಂಟನೆಯ ಸರ್ಗ

### ತಮಿಳುನಾಡಿನ ದುರ್ದೆಸೆ

(ದೇವತೆಯೊಬ್ಬಳು ಕಂಪಣನಿಗೆ ಹೇಳುತ್ತಾಳೆ)

"ಮುಸಲ್ಮಾನರ ಆಕ್ರಮಣಕ್ಕೆ ತುತ್ತಾಗಿ ಅವರ ಆಡಳಿತಕ್ಕೊಳಗಾದ ತಮಿಳುನಾಡು ದುರವಸ್ಥೆಯಿಂದ ತೊಳಲಾಡುತ್ತಿದೆ. ವ್ಯಾಘ್ರಪುರಿ (ಚಿದಂಬರ)ಯಲ್ಲಿ ಹುಲಿಗಳು ಓಡಾಡುತ್ತಿದ್ದು ಆ ಹೆಸರು ಅನ್ವರ್ಥಕವಾಗಿಬಿಟ್ಟಿದೆ. ಶ್ರೀರಂಗದಲ್ಲಿ ಶ್ರೀರಂಗನಾಥ ದೇವರ ಗುಡಿಯು ಹಾಳು ಬಿದ್ದು ಅದರ ಇಟ್ಟಂಗಿಗಳೆಲ್ಲ ಉದುರಿಬೀಳತೊಡಗಿವೆ. ಅದರಿಂದ ಶ್ರೀರಂಗನಾಥನ ಯೋಗನಿದ್ರೆಗೆ ಭಂಗ ಬರಬಾರದೆಂದು ಆದಿಶೇಷನು ತನ್ನ ಹೆಡೆಯಿಂದ ಅವನನ್ನು ಕಾಪಾಡುತ್ತಿದ್ದಾನೆ. ಇತರ ಗುಡಿಗಳನ್ನು ನೋಡಿದಾಗ ನನಗೆ ಬಹಳ ವ್ಯಥೆಯಾಗುತ್ತಿದೆ. ಅವುಗಳ ಬಾಗಿಲುಗಳಿಗೆ ಗೆದ್ದಲಿ ಹಿಡಿದಿದೆ. ಗರ್ಭಗೃಹಗಳ ಛಾವಣಿಗಳಲ್ಲೆಲ್ಲ ದಟ್ಟವಾಗಿ ಹುಲ್ಲು ಬೆಳೆದಿದೆ. ಸುತ್ತಲಿನ ಗುಡಿಗಳಲ್ಲಿ ಮೊದಲು ಮೃದಂಗಗಳ ನಿನಾದ ಪ್ರತಿಧ್ವನಿಸುತ್ತಿತ್ತು; ಈಗ ನರಿಗಳ ಭಯಂಕರವಾದ ಕೂಗು ಕೇಳಿಬರುತ್ತಿದೆ. ಕಾವೇರಿ ನದಿಯು ದಂಡೆಯ ಭಾಗಗಳೆಲ್ಲ ಒಡೆದುಹೋಗಿವೆ. ಹೀಗಾಗಿ, ಎಲ್ಲ ದಿಕ್ಕುಗಳಲ್ಲಿ ದಾಳಿಮಾಡಿ ಹಾಹಾಕಾರ ಎಬ್ಬಿಸಿದ ತುರುಷ್ಕರಂತೆ ಅದು ತನ್ನ ಎಲ್ಲೆ ಮೀರಿ ಹರಿಯುತ್ತ ಗಂಡಾಂತರಕಾರಿಯಾಗಿದೆ. ಬ್ರಾಹ್ಮಣರ ಅಗ್ರಹಾರಗಳಲ್ಲಿ ಈ ಮೊದಲು ಯಜ್ಞ-ಯಾಗಾದಿಗಳ ಸುಗಂಧದ ಹೊಗೆ ಏಳುತ್ತಿತ್ತು ಮತ್ತು ವೇದಮಂತ್ರಗಳ ಉದ್ಘೋಷ ಕೇಳಿಬರುತ್ತಿತ್ತು. ಆದರೆ ಈಗ ಅವು ಮದ್ಯ ಮಾಂಸಗಳ ಪೇಟೆಯಾಗಿವೆ; ಅಲ್ಲಿ ಸುಟ್ಟ ಮಾಂಸದ ಕೆಟ್ಟ

ವಾಸನೆ ತುಂಬಿವೆ ಮತ್ತು ಸೆರೆಕುಡುಕ ತುರುಷ್ಕರ ಬೊಬ್ಬಾಟ ಕೇಳಿಬರುತ್ತಿದೆ.

ಮಧುರಾಪಟ್ಟಣದ ದುರವಸ್ಥೆಯಂತೂ ಕೇಳಬಾರದು. ಅದರ ತೋಟಗಳಲ್ಲಿಯ ತೆಂಗಿನಮರಗಳನ್ನೆಲ್ಲ ಕಡಿದೊಗೆಯಲಾಗಿದೆ. ಅವುಗಳ ಸ್ಥಾನದಲ್ಲಿ ಮನುಷ್ಯರ ರುಂಡಗಳನ್ನು ಚುಚ್ಚಿದ ಕಬ್ಬಿಣದ ಶೂಲಗಳನ್ನು ನೆಡಲಾಗಿದೆ. ಅದರ ರಾಜಬೀದಿಗಳಲ್ಲಿ ಮೊದಲು ಸುಂದರಿಯರ ಕಾಲ್ಗೆಜ್ಜೆಗಳ ಮಂಜುಳಧ್ವನಿ ಕೇಳಿಬರುತ್ತಿತ್ತು. ಆದರೆ ಈಗ ಅಲ್ಲಿ ಸೆರೆಹಿಡಿದು ಎಳೆದೊಯ್ಯಲ್ಪಡುತ್ತಿರುವ ಬ್ರಾಹ್ಮಣರ ಕೈ-ಕಾಲುಗಳಿಗೆ ತೊಡಿಸಿದ ಬೇಡಿಗಳ ಧ್ವನಿ ಕಿವಿಗೆ ನೋವನ್ನುಂಟು ಮಾಡುತ್ತಿದೆ. ಆ ಪಟ್ಟಣದ ಸುತ್ತಲಿನ ಗೋಪುರಗಳ ಮೇಲಿನ ಗೊಂಬೆಗಳಿಗೆ ರೇಷ್ಮೆಯ ಸಿಂಗಾರವಿತ್ತು. ಈಗ ಅವುಗಳಿಗೆ ಜೇಡಿನ ಬಲೆಗಳು ಮುತ್ತಿಕೊಂಡಿವೆ. ಅರಮನೆಗಳ ಅಂಗಳಗಳು ಮೊದಲು ಚಂದನರಸ ಸಿಂಪಡಿಸಲ್ಪಟ್ಟು ತಂಪಾಗಿದ್ದವು. ಈಗ ಅಲ್ಲಿ ಹೆಡೆಮುರಿ ಕಟ್ಟಿ ತಂದ ಬ್ರಾಹ್ಮಣರ ಕಣ್ಣೀರು ಸುರಿಯುತ್ತಿದೆ. ಅದನ್ನೆಲ್ಲ ನೋಡುವದು ಅಸಹ್ಯವಾಗಿದೆ. ಆ ಪಟ್ಟಣದಲ್ಲಿ ಎಲ್ಲ ಕಡೆ ಯವನರೇ ವಾಸಿಸುತ್ತಿದ್ದಾರೆ. ಅವರು ಸಾಕಿದ ಗಿಳಿಗಳು ಪರ್ಶಿಯನ್ ಶಬ್ದಗಳನ್ನು ಮಾತ್ರ ಉಚ್ಚರಿಸುತ್ತವೆ. ಅದನ್ನು ಕೇಳಿದಾಗ ಉಂಟಾಗುವ ವೇದನೆಯು ಹಾಳುಬಿದ್ದ ತೋಟಗಳಲ್ಲಿ ಕಿರಿಚುತ್ತಿರುವ ಗೂಗೆಗಳ ಕೂಗಿನಿಂದಲೂ ಉಂಟಾಗುವದಿಲ್ಲ. ತಾಮ್ರಪರ್ಣಿ ನದಿಯ ನೀರು ಸುಂದರಿಯರ ಸ್ತನಗಳ ಚಂದನಲೇಪದ ಮೂಲಕ ಬಿಳಿಯಬಣ್ಣದ್ದಾಗಿ ಹರಿಯುತ್ತಿತ್ತು. ಆದರೆ ಈಗ ಪುಂಡರು ಕೊಂದ ಆಕಳುಗಳ ರಕ್ತದಿಂದ ಕೆಂಬಣ್ಣದ್ದಾಗಿ ಹರಿಯುತ್ತದೆ.

"ರಾಜಾ, ಎಲ್ಲೆಡೆ ಅಧರ್ಮ ತಾಂಡವವಾಡುತ್ತಿದೆ! ಭೂಮಿತಾಯಿ ಬಂಜೆಯಾಗಿದ್ದಾಳೆ. ಇಂದ್ರ ಮಳೆ ಸುರಿಸುತ್ತಿಲ್ಲ. ಯವನರು ಕೊಲ್ಲದೇ ಬಿಟ್ಟ ಮನುಷ್ಯರನ್ನು ಯಮನು ಮನಬಂದಂತೆ ಬಹುಸಂಖ್ಯೆಯಲ್ಲಿ ನುಂಗಿಬಿಡುತ್ತಿದ್ದಾನೆ! ಇಂತಹ ಭಯಾನಕ ದುರವಸ್ಥೆಯಲ್ಲಿರುವ ತಮಿಳರನ್ನು ನೋಡಿದಾಗ ಉಂಟಾಗುವ ವೇದನೆ ಬಣ್ಣಿಸಲಸಾಧ್ಯ! ಅವರ ತುಟಿಗಳು ನಿಟ್ಟುಸಿರಿನಿಂದ ಒಣಗಿಹೋಗಿವೆ; ಎಣ್ಣೆ ಕಾಣದೆ ಕೂದಲುಗಳು ಜೆಲ್ಲಾಪಿಲ್ಲಿಯಾಗಿವೆ. ಯಾರಿಗೂ ಸುಖವಿಲ್ಲ. ಕಲಿಯೊಬ್ಬನೇ ಅಟ್ಟಹಾಸಗೈಯುತ್ತ ಮೆರೆಯುತ್ತಿದ್ದಾನೆ; ಏಕೆಂದರೆ, ಶಾಸ್ತ್ರಾಭ್ಯಾಸ ಅಸ್ತವಾಗಿದೆ; ವಿನಯ ಅಡಗಿ ಕುಳಿತಿದೆ; ಧರ್ಮದ ಮಾತು ಲೋಪವಾಗಿದೆ; ಚಾರಿತ್ರ್ಯ ನಾಶವಾಗಿದೆ; ಸತ್ಕರ್ಮ ಕೊನೆಗೊಂಡಿದೆ; ಕುಲೀನತೆ ಮರೆಯಾಗಿದೆ. ಹೀಗಾಗಿ ಕಲಿಯೊಬ್ಬನೇ ಕೃತಾರ್ಥನಾಗಿದ್ದಾನೆ."

## ಕಂಪಣನು ಪಡೆದ ದೈವೀಖಡ್ಗ

ಹೀಗೆ ಆ ದೇವತೆಯು ಯವನರಿಂದುಂಟಾದ ಘೋರ ದುರವಸ್ಥೆಯನ್ನು ಬಣ್ಣಿಸಿ ಅದ್ಭುತ ಸಾಮರ್ಥ್ಯವುಳ್ಳ ಖಡ್ಗವೊಂದನ್ನು ಎತ್ತಿ ತೋರಿಸಿದಳು. ಆ ಖಡ್ಗವು ಅದೇ ಆಗ ಪರೆ ಕಳಚಿದ ಸರ್ಪದಂತೆ ಹೊಳೆಯುತ್ತಿತ್ತು. ಅಲ್ಲಿ ಉರಿಯುತ್ತಿದ್ದ ದೀಪಗಳು ಅದರಲ್ಲಿ ಪ್ರತಿಬಿಂಬಿತವಾಗಿ ಅದು ಮಿಂಚನ್ನೊಳಗೊಂಡ ಹೊಸ ಮೋಡದಂತೆ ಕಂಡಿತು. ಶತ್ರುರಾಜರ ಮಡದಿಯರ ಕಣ್ಣೀರು ಧಾರಾಕಾರ ಸುರಿಯಿಸುವ ಸಾಮರ್ಥ್ಯವುಳ್ಳ ಆ ಖಡ್ಗವನ್ನು ಅವನ ಮುಂದಿರಿಸಿ ಆ ದೇವತೆ ಹೀಗೆ ನುಡಿದಳು:–

"ಜನರೊಡೆಯನೇ, ಇದು ದೇವತೆಗಳ ನಾನಾ ಆಯುಧಗಳ ಅಂಶಗಳಿಂದ ದೇವಶಿಲ್ಪಿ ವಿಶ್ವಕರ್ಮನು ನಿರ್ಮಿಸಿದ ಖಡ್ಗ. ಅವನು ಇದನ್ನು ಶಿವನಿಗೆ ಅಸುರ ವಿಜಯಕ್ಕಾಗಿ ಕಾಣಿಕೆಯನ್ನಾಗಿ ಕೊಟ್ಟನು. ಅಸುರ ವಿಜಯದ ಬಳಿಕ ಶಿವನು ತನ್ನನ್ನು ತಪಸ್ಸಿನಿಂದ ಸಂತುಷ್ಟಗೊಳಿಸಿದ ಪಾಂಡ್ಯರಾಜನಿಗೆ ಇದನ್ನು ಕೊಟ್ಟನು. ಈ ಖಡ್ಗದ ಮೂಲಕ ಪಾಂಡ್ಯರಾಜರು ಈ ಭೂಮಂಡಲದ ಏಕಾಧಿಪತ್ಯವನ್ನು ಉಪಭೋಗಿಸಿದರು. ಕಾಲಕ್ರಮೇಣ ಪಾಂಡ್ಯವಂಶದ ರಾಜರ ಸಾಮರ್ಥ್ಯ ಕಡಿಮೆಯಾಯಿತು. ಅದನ್ನು ತಿಳಿದ ಅಗಸ್ತ್ಯಮಹಾಮುನಿಯು ಮಹಾಬಲಶಾಲಿಯಾಗಿರುವ ನಿನಗೆ ಈ ಖಡ್ಗವನ್ನು ಕಳಿಸಿರುವನು. ನೀನು ಹುಟ್ಟಿನಿಂದಲೇ ಸಾಹಸ ಸ್ವಭಾವದವನು. ಈ ಖಡ್ಗವನ್ನು ಧರಿಸಿದರೆ ನಿನ್ನನ್ನು ಯುದ್ಧದಲ್ಲಿ ಗೆಲ್ಲಲಸಾಧ್ಯ. ಕಾಡು ಬೆಂಕಿಯು ಮೊದಲೇ ಧಗಧಗನೆ ಉರಿಯುವಂತಹದು. ಅದಕ್ಕೆ ಬಿರುಗಾಳಿ ಸೇರಿದರೆ ಕೇಳುವುದುಂಟೇ? ಈ ಖಡ್ಗ ನಿನ್ನ ಬಳಿ ಇದ್ದಾಗ ವೈರಿಗಳ ಯಾವುದೇ ಆಯುಧವು ನಿನ್ನನ್ನು ಘಾಸಿಗೊಳಿಸಲಾರದು. ಸಿಡಿಲಿನಂತಿರುವ ಇದನ್ನು ನೀನು ಝಳಪಿಸತೊಡಗಿದರೆ ನಿನ್ನ ಎದುರಾಳಿಯಾಗಿ ಯಮನೂ ನಿಲ್ಲಲಾರನು. ಇತರರ ಪಾಡೇನು?

"ಈ ಖಡ್ಗವನ್ನು ಧರಿಸಿಕೊಂಡು ನೀನು ದಕ್ಷಿಣದ ಮಧುರೆಯಲ್ಲಿ ಕಂಸನಂತೆ ಪ್ರಜಾಪೀಡಕನಾಗಿರುವ ಯವನಾಧಿಪತಿಯ ಮೇಲೇರಿ ಹೋಗಿ ಶ್ರೀಕೃಷ್ಣನಂತೆ ವಿಜಯಶಾಲಿಯಾಗು. ಈ ಕಡಗವನ್ನೂ ಧರಿಸು; ಇದನ್ನೇನು ನೀನು ಈಗಲೇ ಮೊದಲ ಬಾರಿ ಧರಿಸುತ್ತಿಲ್ಲ. ಇದು ಮೂರೂ ಲೋಕಗಳನ್ನು ಸಂರಕ್ಷಿಸುವ ನಿನ್ನ ವ್ರತದ ಚಿಹ್ನೆಯೇ

ಆಗಿದೆ. ಮತ್ತು ಇದನ್ನು ನಿನ್ನ ಹೊರತು ಯಾರೂ ಧರಿಸಲಾರರು. ಈ ಖಡ್ಗದಿಂದ ತುರುಷ್ಕರ ರುಂಡಗಳನ್ನು ಚೆಂಡಾಡಿ ರಾಶಿ ಹಾಕು. ನಿನ್ನ ಪ್ರತಾಪವೆಂಬ ಸೂರ್ಯನು ಸೆರೆಕುಡಿದು ಮದವೇರಿದ ಯವನರಾಣಿಯರ ಮುಖದ ಮೇಲಿನ ನಗೆಯೆಂಬ ಬೆಳದಿಂಗಳನ್ನು ಓಡಿಸಿಬಿಡಲಿ.

"ರಾಜನೇ, ಇಂದು ಧರ್ಮವು ದುಷ್ಟ ಯವನರ ದೌರ್ಜನ್ಯಕ್ಕೆ ತುತ್ತಾಗಿ ನರಳಾಡುತ್ತಿದೆ. ಸಂತಾಪದಿಂದ ಬಿರಿದ ಭೂಮಿಗೆ ವೈರಿಗಳ ರಕ್ತವನ್ನು ಸುರಿಸಿ ತಂಪನ್ನುಂಟು ಮಾಡು. ಈ ಖಡ್ಗವು ನಿನ್ನ ದುಷ್ಟಶತ್ರುಗಳ ಮುಂಡಗಳಿಂದ ಚಿಮ್ಮುವ ರಕ್ತದಿಂದ ರಾಕ್ಷಸರಿಗೆಲ್ಲ ಭೂರಿಭೋಜನ ನೀಡಲಿ. ಪ್ರರಾಕ್ರಮಿಯೇ, ಜನರಲ್ಲಿ ಹಾಹಾಕಾರವೆಬ್ಬಿಸುವಲ್ಲೇ ತೊಡಗಿರುವ ಮತ್ತು ಮೂರು ಲೋಕಗಳಿಗೂ ಕಂಟಕಪ್ರಾಯನಾಗಿರುವ ಆ ತುರುಷ್ಕರಾಜನನ್ನು ಕೂಡಲೇ ನಾಶಗೊಳಿಸು. ಮತ್ತು ರಾಮಸೇತುವಿನ ನಡುವೆ ನಿನ್ನ ಜಯಸ್ತಂಭಗಳನ್ನು ನಿಲ್ಲಿಸು. ನೀನು ದಕ್ಷಿಣದೇಶದ ಅಧಿಪತಿಯಾದಾಗಲೇ ಕಾವೇರಿನದಿಯು ಹಿಂದಿನಂತೆ ಜನಾನುಕೂಲಳಾಗಿ ಹರಿಯುವಳೆಂಬುದನ್ನು ಚೆನ್ನಾಗಿ ತಿಳಿ.'

(ಮುಂದಿನ ಭಾಗ ದೊರೆತಿಲ್ಲ)

# ಕೊನೆಯ ಸರ್ಗ

(ಪ್ರಾರಂಭದ ಭಾಗ ದೊರೆತಿಲ್ಲ)

## ಮುಸಲ್ಮಾನರೊಡನೆ ಕಂಪಣನ ಕಾಳಗ

ಕಂಪಣನ ಬಿಲ್ಲುಗಾರರು ಅರ್ಧಚಂದ್ರಬಾಣಗಳಿಂದ, ಆನೆಗಳ ಮೇಲೆ ಕುಳಿತು ಕಾದಾಡುತ್ತಿದ್ದ ಮುಸಲ್ಮಾನ ಯೋಧರ ಕೈಗಳನ್ನೇ ಕತ್ತರಿಸಿದರು ಜನಮೇಜಯನ ಸರ್ಪ ಯಜ್ಞದಲ್ಲಿ ಸರ್ಪಗಳು ಬಂದು ಬೀಳುವಂತೆ ಆ ಕೈಗಳು ರಣರಂಗದೊಳಗಿನ ರಕ್ತದ ಮಡುವುಗಳಲ್ಲಿ ಬಂದು ಬಿದ್ದವು. ಕಾಲಾಳುಗಳು ಕತ್ತಿಗಳಿಂದ ತುಂಡರಿಸಿದ ಆನೆಗಳ ರುಂಡಗಳ ಮೇಲಿನ ಮುತ್ತುಗಳು ಚೆಲ್ಲಾಪಿಲ್ಲಿಯಾಗಿ ನೆಲದ ಮೇಲೆ ಹರಡಿಬಿದ್ದವು. ಕೆಳಗೆ ಬಿದ್ದ ಆನೆಗಳ ಕುಂಭಸ್ಥಲಗಳ ರಕ್ತವನ್ನು ಸೊಂಡಿಲುಗಳ ಮೂಲಕ ನಿಶಾಚರರು ಪರಮಾನಂದದಿಂದ ಹೀರುತ್ತಿದ್ದರು. ಆಗ ಬಾಯೊಳಗೆ ಬಂದು ಸೇರುವ ಕುಂಭಸ್ಥಲಗಳೊಳಗಿನ ಮುತ್ತುಗಳನ್ನು ಉಗುಳಿ ಬಿಡುತ್ತಿದ್ದರು. ಅದೇ ಆಗ ಸತ್ತುಬಿದ್ದ ಆನೆಯೊಂದರ ಒಳಮಾಂಸವನ್ನು ತಿನ್ನಲು ಹಕ್ಕಿಗಳು ಅದರ ಮೈಯೊಳಗೆ ತೂರಿಕೊಂಡವು. ಆಗ ಆ ಆನೆಯ ಮೈ ತುಸು ನಡುಗಿತು. ಮತ್ತು ಅದರ ಮಾಂಸವನು ತಿನ್ನಲು ಬಂದ ನರಿಯೊಂದು ಆನೆಯು ಜೀವದಿಂದಿದೆಯೆಂದು ಭಾವಿಸಿ ಹಸಿದಿದ್ದರೂ ದೂರ ಓಡಿಹೋಯಿತು. ವೀರಯೋಧರು ಕತ್ತರಿಸಿದ ಆನೆಗಳ ರುಂಡಗಳು ನೆಲಕ್ಕೆ ಬೀಳುವ ಮೊದಲೇ ರಾಕ್ಷಸಿಯರು ಕಿವಿಯಾಭರಣ ಮಾಡಿಕೊಳ್ಳಲು ಅವುಗಳನ್ನು ಎತ್ತಿಕೊಂಡು ಹೋಗುತ್ತಿದ್ದರು.

ಇನ್ನೊಂದು ಆನೆಯು ಒಬ್ಬ ಯೋಧನನ್ನು ಕಾಲಿನಿಂದ ಹಿಡಿದು ಸೊಂಡಿಲಿನಿಂದ ಎತ್ತಿ ಮೇಲಕ್ಕೆ ಒಗೆಯಿತು ಮತ್ತು ಅವನನ್ನು ಪುನಃ ಹಿಡಿಯಬೇಕೆಂದು ಪ್ರಯತ್ನಿಸಿದಾಗ ಅವನು ಅದರ ಎರಡೂ ದಂತಗಳನ್ನು ಕತ್ತರಿಸಿ ಅವುಗಳೊಡನೆ ನೆಲಕ್ಕೆ ಬಿದ್ದನು. ಇನ್ನೊಂದು ಆನೆಯು ಶತ್ರುಸೈನಿಕನನ್ನು ಮೇಲಕ್ಕೆ ಒಗೆದಾಗ ಅವನು ಅದರ ಬೆನ್ನ ಮೇಲೆ ಜಿಗಿದು ಅಲ್ಲಿ ಕುಳಿತ ಯೋಧನನ್ನು ಕೊಂದು ಆ ಆನೆಯ ಮೇಲೆ ತಾನೇ ಸವಾರಿ ಮಾಡತೊಡಗಿದನು. ಇನ್ನೊಬ್ಬ ಯೋಧನು ಶತ್ರುವಿನ ಬಾಣಗಳ ಸುರಿಮಳೆಯಿಂದ ಕೊಲ್ಲಲ್ಪಟ್ಟು ಸ್ವರ್ಗ ಸೇರಿದನು. ಅವನು ಸ್ವರ್ಗದಿಂದ ತನ್ನನ್ನು ಕೊಂದವನ ಪರಾಕ್ರಮವನ್ನು ಹೊಗಳುತ್ತ ಅವನ ಮೇಲೆ ಹೂಮಳೆಗರೆದನು. ಮತ್ತೊಬ್ಬನು ಎರಡೂ ಕಡೆ ಚೂಪಾಗಿದ್ದ ಭಲ್ಲೆಯನ್ನು ಶತ್ರುವಿನ ಎದೆಗೆ ಚುಚ್ಚುವಂತೆ ಎಸೆದನು. ಅವನು ಅದರೊಡನೆಯೇ ಓಡಿಬಂದು ಅದನ್ನು ಎಸೆದವನನ್ನೇ ಅಪ್ಪಿಕೊಂಡು ಕೊಂದು ಹಾಕಿದನು. ಇದನ್ನು ಅವನೂ ಮೆಚ್ಚಿಕೊಂಡನು. ಗುಣಕ್ಕೆ ಮಾತ್ಸರ್ಯವುಂಟೇ? ಬಹಳ ಸಮಯದ ತನಕ ದ್ವಂದ್ವಯುದ್ಧದಲ್ಲಿ ತೊಡಗಿದ ಇಬ್ಬರು ಯೋಧರು ಒಮ್ಮೆಲೇ ಪರಸ್ಪರರ ರುಂಡ ಕತ್ತರಿಸಿದರು. ಮತ್ತು ತಕ್ಷಣ ತಮ್ಮ ದೇಹಗಳನ್ನು ಚೆಲ್ಲಿ ಕೊಟ್ಟು ಗೆಳೆಯರಾಗಿ ಸ್ವರ್ಗಕ್ಕೆ ತೆರಳಿದರು.

ಕಂಪಣನು ಪರಾಕ್ರಮದಿಂದ ಕಾದುತ್ತಿದ್ದನು. ಅವನ ಕತ್ತಿಯ ಒಂದೇ ಹೊಡೆತಕ್ಕೆ ಆನೆಯೂ ಅದರ ಮೇಲಿನ ಯೋಧನೂ ನೆಲಕ್ಕೆ ಉರುಳುತ್ತಿದ್ದರು. ಅವನು ಆನೆಗಳ ಕುಂಭಸ್ಥಳಗಳನ್ನು ಸೀಳಿ ಬೀಳಿಸುತ್ತಿದ್ದುದರಿಂದ ಅಲ್ಲಿ

ಅನೇಕ 'ತಾಮ್ರಪರ್ಣಿ' (ಕೆಂಬಣ್ಣದ) ನದಿಗಳು ಹರಿಯು ಲಾರಂಭಿಸಿದವು. ಆ ಕುಂಭಸ್ಥಳಗಳಿಂದ ಹೊರಚೆಲ್ಲಿದ ಮುತ್ತುಗಳು (ಆ ನದಿಗಳ ದಂಡೆಗಳ ಮೇಲಿನ) ಉಸುಕಿನ ಕಣಗಳಂತೆ ಕಂಡವು. ಅವನು ಎದುರು ಬಂದ ಶತ್ರುಸೈನಿಕ ರನ್ನೆಲ್ಲ ತುಂಡರಿಸುತ್ತ ರಣರಂಗದಲ್ಲಿ ಸಂಚರಿಸಿದನು. ತನ್ನ ಗದೆಯಿಂದ ಅವರ ತಲೆಗಳನ್ನು ಕುಟ್ಟಿ ಪುಡಿಮಾಡಿದನು.

ಹೀಗೆ ಕಂಪಣನು ತನ್ನ ನಾನಾವಿಧ ಆಯುಧಗಳಿಂದ ಶತ್ರುಸೈನಿಕರಲ್ಲಿ ಹಾಹಾಕಾರ ಎಬ್ಬಿಸಿದಾಗ ಅವರು ದಿಕ್ಕಾ ಪಾಲಾಗಿ ಓಡಿಹೋದರು. ಈ ಯುದ್ಧವನ್ನು ನೋಡಿದಾಗ ಕಲಹಪ್ರಿಯ ನಾರದನಿಗೆ ಅತಿ ಸಂತಸವಾಯಿತು. ಇಂತಹ ಸಂತಸ ಅವನಿಗೆ ಶ್ರೀರಾಮನಿಂದಾಗಲಿ, ಪರಶುರಾಮ, ಭೀಮ ಅಥವಾ ಅರ್ಜುನರಿಂದಾಗಲಿ ದೊರೆತಿರಲಿಲ್ಲ.

**ಸುಲ್ತಾನನೊಡನೆ ಕಂಪಣನ ದ್ವಂದ್ವಯುದ್ಧ**

ತನ್ನ ಸೈನಿಕರು ಹೆದರಿ ಓಡಿಹೋದದ್ದನ್ನು ಕಂಡ ಯವನರಾಜನು ವೃತ್ರಾಸುರನು ಇಂದ್ರನ ಮೇಲೇರಿ ಬಂದಂತೆ ತನ್ನ ಭೀಕರ ಬಿಲ್ಲಿನೊಡನೆ ಕಂಪಣನ ಮೇಲೇರಿ ಬಂದನು. ಕಣ್ಣುಗಳಲ್ಲಿ ಕಿಡಿ ಕಾರುತ್ತ ಹುಬ್ಬುಗಂಟ್ಟಿಕ್ಕಿದ್ದ ಅವನು ನೋಡಲು ಭಯಂಕರನಾಗಿದ್ದನು. ಅವನ ಬಿಲ್ಲಿನ ಟೇಂಕಾರವನ್ನು ಕೇಳಿದಾಗ ಅವನನ್ನು ಬಿಟ್ಟುಹೋದ ವಿಜಯಲಕ್ಷ್ಮಿಯು ಪುನಃ ಅವನ ಬಳಿ ಬಂದವಳೋ ಎಂದೆನಿಸು ತ್ತಿತ್ತು. ಅವನು ಸಾಮಾನ್ಯನಾಗಿರಲಿಲ್ಲ; ಕೋಪಕ್ರೌರ್ಯಗಳ ಮೂರ್ತಿಯಾಗಿದ್ದನು; ಚೋಳ-ಪಾಂಡ್ಯರನ್ನು ಮಣ್ಣು ಮುಕ್ಕಿಸಿದ್ದನು; ವೀರಬಲ್ಲಾಳನ ಸಂಪತ್ತನ್ನು ಸೂರೆ ಗೊಂಡಿದ್ದನು. ಇಂತಹ ಅಸಮಸಾಹಸಿ ಮತ್ತು ಪ್ರಖ್ಯಾತ

ವೀರನಾದ ಸುಲ್ತಾನನು ಎದುರಾಳಿಯಾಗಿ ದೊರೆತಿದ್ದರಿಂದ ಕಂಪಣನಿಗೆ ಸಂತೋಷವೇ ಉಂಟಾಯಿತು.

ಅವರಿಬ್ಬರೂ ತಂತಮ್ಮ ತೋಳ್ಬಲಕ್ಕೆ ತಕ್ಕಂತೆ ಹೋರಾಡಿದರು; ಬಾಣಗಳ ಬಿರುಮಳೆ ಸುರಿಸಿದರು; ವೀರಶ್ರೀಯ ಕುಡಿನೋಟಗಳಂತಿದ್ದ ಕಂಪಣನ ಬಾಣಗಳನ್ನು ಯವನರಾಜನೂ ಕಾಳರಾತ್ರಿಯ ಕುಡಿನೋಟಗಳಂತಿದ್ದ ಆತನ ಬಾಣಗಳನ್ನು ಕಂಪಣನೂ ತಪ್ಪಿಸಿಕೊಂಡರು. ಕಂಪಣನ ಬಾಣಗಳು ಕೇರಲರಾಜರ ಪ್ರಾಣವಾಯುವನ್ನು ಕುಡಿದ ಸರ್ಪಗಳಾಗಿದ್ದವು; ವನ್ಯದೇಶದ ರಾಜರನ್ನು ಸುಟ್ಟ ಕಾಡುಬೆಂಕಿಯ ಜ್ವಾಲೆಗಳಾಗಿದ್ದವು; ಆಂಧ್ರರಾಜರ ಗಾಢಾಂಧಕಾರದ ಆಡಳಿತವನ್ನು ನಿವಾರಿಸಿದ ಸೂರ್ಯಕಿರಣಗಳಾಗಿದ್ದವು. ಅಂತಹ ಆ ಬಾಣಗಳು ಈಗ ಸುಲ್ತಾನನ ಮೇಲೆರಗಿದವು. ಸುಲ್ತಾನನ ಬಾಣಗಳೂ ಕಂಪಣನ ಶರೀರದ ಮೇಲೆ ಗಾಯ ಮಾಡಿದವು. ಆದರೆ ಆ ಗಾಯಗಳು ವಿಜಯಶ್ರೀಯ ರತಿಸುಖಕ್ಕೆ ಹಾತೊರೆದು ಉಂಟುಮಾಡಿದ ಉಗುರಿನ ಗಾಯಗಳಂತೆ ಕಂಗೊಳಿಸಿದವು.

ಸುಲ್ತಾನನ ಕಾಗೆ-ಬಾವುಟವು ಕಲಿಯ ಕಿರೀಟದಂತೆ ತೋರುತ್ತಿತ್ತು. ಅದನ್ನು ಕಂಪಣನು ಕತ್ತರಿಸಿ ನೆಲಕ್ಕುರುಳಿಸಿದಾಗ ಅದರೊಡನೆ ಸುಲ್ತಾನನ ಗೆಲುವಿನ ಆಸೆಯೂ ಮಣ್ಣುಪಾಲಾಯಿತು. ಅವನು ಕಂಪಣನ ಮೇಲೆ ಬಾಣಗಳ ಬಿರುಮಳೆಯನ್ನೇ ಸುರಿಸತೊಡಗಿದಾಗ ಕಂಪಣನು ಅವನ ಬಿಲ್ಲಿನ ಹೆದೆಯನ್ನೇ ಕತ್ತರಿಸಿಬಿಟ್ಟನು. ಅದರಿಂದ ಯವನ ರಾಜಲಕ್ಷ್ಮಿಯ ಮಂಗಲಸೂತ್ರವನ್ನೇ ತುಂಡರಿಸಿದಂತಾಯಿತು. ಆಗ ಕಡುಸಿಟ್ಟಿಗೆದ್ದ ಸುಲ್ತಾನನು ಬಿಲ್ಲನ್ನು

ಬಿಸುಟೊಗೆದು ತನ್ನ ಕುದುರೆಯ ಜೀನಿನಲ್ಲಿ ನೇತಾಡುತ್ತಿದ್ದ ಭೀಕರ ಕತ್ತಿಯನ್ನು ಹಿರಿದು ಝಳಪಿಸಿದನು. ಆಗ ಕಂಪಣನು ತನಗೆ ಅಗಸ್ತ್ಯಮುನಿಗಳು ಕಳಿಸಿದ ದೈವೀಖಡ್ಗವನ್ನು ಒರೆಯಿಂದ ಹಿರಿದು ಸುಲ್ತಾನನನ್ನು ಮುಗಿಸಿಯೇ ಬಿಡಬೇಕೆಂದು ಮೇಲೇರಿ ಹೋದನು. ಆ ಖಡ್ಗವು ಸುಲ್ತಾನನ ಪ್ರಾಣವನ್ನೇ ಹೀರಲು ಹಾತೊರೆಯುವಂತೆ ಮೇಲಕ್ಕೆ ಹೋಯಿತು ಮತ್ತು ಕ್ಷಣಮಾತ್ರದಲ್ಲಿ ಅವನ ರುಂಡದೊಡನೆ ಕೆಳಕ್ಕಿಳಿಯಿತು. ಒಮ್ಮೆಯೂ ಪರರ ಸೇವೆಗಾಗಿ ಬಾಗಿರದ, ತುರುಷ್ಕಸಾಮ್ರಾಜ್ಯದಲ್ಲಿ ಯಾವಾಗಲೂ ಅಭಿಷೇಕ ಮಾಡಿಸಿಕೊಂಡು ಮತ್ತು ದೇವತೆಗಳಿಗೂ ಮಣಿದಿರದ ಆ ರುಂಡವು ನೆಲಕ್ಕುರುಳಿತು. ಹೀಗೆ ಆ ರುಂಡವು ನೆಲಕ್ಕುರುಳಿದ್ದರೂ ಕುದುರೆಯ ಮೇಲಿನ ಮುಂಡವು ಮಾತ್ರ ಒಂದು ಕೈಯಿಂದ ಕುದುರೆಯ ಲಗಾಮನ್ನು ಹಿಡಿದುಕೊಂಡಿದ್ದು ಇನ್ನೊಂದು ಕೈಯಿಂದ ಕತ್ತಿಯನ್ನು ಎತ್ತಿ ಹೊಡೆಯಲು ಅನುವಾಯಿತು. ಇವನ್ನು ನೋಡಿದ ಕಂಪಣನ ಬಾಯಿಂದ 'ಭಲೇ' ಎಂಬ ಉದ್ಗಾರ ಹೊರಟಿತು.

ಆಗ ಹೆಮ್ಮೆಯಿಂದ ಮೇಲೆತ್ತಿದ ಕಂಪಣನ ತಲೆಯ ಮೇಲೆ ಸ್ವರ್ಗದಿಂದ ಹೂಮಳೆಗರೆಯಿತು.

ಹೀಗೆ ಸುಲ್ತಾನನ ನಾಶವಾದ ಬಳಿಕ ದಕ್ಷಿಣದೇಶವು ಕಾಡುಬೆಂಕಿಯಿಂದ ಪಾರಾದ ಅಡವಿಯಂತೆ, ಗ್ರಹಣದಿಂದ ಬಿಡುಗಡೆ ಹೊಂದಿದ ಆಗಸದಂತೆ ಮತ್ತು ಕಾಲಿಯಮರ್ದನದ ಬಳಿಕ ಕಂಡ ಯಮುನಾನದಿಯಂತೆ ಶಾಂತವಾಯಿತು. ಶತ್ರುಪಾಳ್ಯದಲ್ಲಿ ಬದುಕುಳಿದ ಸೈನಿಕರಿಗೆ ಕಂಪಣನು ಅಭಯ

ನೀಡಿದನು. ಮತ್ತು ಸುಖಸುಮ್ಮಾನಗಳಿಂದ ರಾಜ್ಯವಾಳಿದನು

(ಮುಂದಿನ ಭಾಗ ದೊರೆತಿಲ್ಲ)

## ಕಾವ್ಯಗುಣಗಳು

ಪ್ರಾರಂಭದಲ್ಲಿ ಹೇಳಿರುವಂತೆ 'ಮಧುರಾವಿಜಯ'ವು ಕಾವ್ಯಗುಣಗಳಿಂದ ಕೂಡಿದೆ. ಈ ಮಹಾಕಾವ್ಯದಲ್ಲಿ ಗಂಗಾದೇವಿಯ ಪ್ರತಿಭೆ ಮೂಡಿಬಂದಿದೆ. ಅವಳೇ ಸೂಚಿಸಿರುವಂತೆ ಅವಳು ಕಾಲಿದಾಸನ ದಾಸಿಯು. ತನ್ನ ವಾಣಿಯು ಸರಸೋದಾರಪದಗಳಿಂದ ಕೂಡಿದ್ದು ಎಂದು ಅವಳೇ ಹೇಳಿಕೊಂಡಿದ್ದಾಳೆ. ಈ ಮಾತಿನ ಅನುಭವವಾಗಬೇಕಾದರೆ ಕಾವ್ಯವನ್ನು ಓದಬೇಕು ಅಥವಾ ಕೇಳಬೇಕು. ಅದು ಅಷ್ಟೊಂದು ಸುಲಭವಾಗಿದೆ, ಹಿತಮಿತವಾಗಿದೆ ಮತ್ತು ರಸವತ್ತಾಗಿದೆ. ಋತುಗಳು, ಸೂರ್ಯಾಸ್ತ-ಚಂದ್ರೋದಯಗಳು, ಯುದ್ಧಗಳು—ಇವುಗಳ ವರ್ಣನೆ ಕವಯಿತ್ರಿಯ ವರ್ಣನಾಕೌಶಲಕ್ಕೆ ಸಾಕ್ಷಿಯಾಗಿವೆ. ಪ್ರಾರಂಭದ ಸರ್ಗಗಳಲ್ಲಿ ಕಂಪಣನು ಶಿಶುವಾಗಿದ್ದಾಗಿನ ಮತ್ತು ಕಿಶೋರಾವಸ್ಥೆಯನ್ನು ದಾಟಿ ತರುಣನಾದಾಗಿನ ಮನೋಹರ ವರ್ಣನೆಗಳಿವೆ. ಹೆರಿಗೆಯಿಂದ ದುರ್ಬಲಳಾಗಿ ಬಿಳಿಚಿಕೊಂಡ ತಾಯಿಯ ತೊಡೆಯ ಮೇಲಿನ ಶಿಶುವಿನ ಈ ವರ್ಣನೆಯನ್ನು ನೋಡಿರಿ:

ಅವೈಕ್ಷತ ಕ್ಷಾಮಶರೀರಯಷ್ಟೇಃ ಕುಮಾರಮುತ್ಸಂಗ
ಗತಂ ಸ ದೇವ್ಯಾಃ।
ಶರತ್ಕೃಶಾಯಾ ಇವ ಶೈವಲಿನ್ಯಾಸ್ತರಂಗಲಗ್ನಂ
ಕಲಹಂಸಶಾವಮ್॥

ಶರತ್ಕಾಲದ ತೊರೆಯು ತೆರೆಗಳ ಮೇಲಿನ ಹಂಸದ ಮರಿಯಂತೆ ದುರ್ಬಲ ಶರೀರದ ರಾಣಿಯು ತೊಡೆಯ ಮೇಲಿನ ಶಿಶುವನ್ನು ಬುಕ್ಕರಾಯನು ಕಂಡನು. ಇಲ್ಲಿ ಸುಂದರವಾದ ಉಪಮಾಲಂಕಾರವು ಬಂದಿದೆ. ಇಂತಹ ಅನೇಕ ಉಪಮಾಲಂಕಾರಗಳನ್ನು ಈ ಕಾವ್ಯದಲ್ಲಿ ಸವಿಯಬಹುದು.

ಅದೇ ಆಗ ತಾರುಣ್ಯದಲ್ಲಿ ಕಾಲಿಡುತ್ತಿದ್ದ ಕಂಪಣನ ಮುಖದ ಮೇಲೆ ಗಡ್ಡ ಮೂಡಿದ್ದನ್ನು ಬಣ್ಣಿಸಿದ ಪರಿ ನೋಡಿರಿ:

ವಿಹಾಯ ಮಧ್ಯಂ ಯದಿ ಲಕ್ಷ್ಮರೇಖಯಾ ಬಹಿಃ
ಪ್ರಸಾರ್ಯೇತ ಸುಧಾಂಶುಮಂಡಲಮ್ ।
ದರೋದಿತಶ್ಮಶ್ರುಕೃತಶ್ರಿಯಸ್ತದಾ ತದಾನನೇಂದೋರು
ಪಮಾನತಾಂ ವ್ರಜೇತ್॥

ಕಂಪಣನ ಮುಖವು ಚಂದ್ರನಿಗೆ ಉಪಮಾನವಾಗಬಹುದು. ಅದಕ್ಕಾಗಿ ಚಂದ್ರನು ಬದಲಾವಣೆ ಮಾಡಿಕೊಳ್ಳಬೇಕು. ಅದೆಂದರೆ, ಅವನ ನಡುವಿನ ಕಪ್ಪು ಚಿಹ್ನೆಯನ್ನು ತೆಗೆದು ಅಂಚಿನಲ್ಲಿ ಒಂದು ಬದಿಗೆ ಪಸರಿಸಿಕೊಳ್ಳಬೇಕು. ಇಲ್ಲಿಯ ಕವಯಿತ್ರಿಯ ಕಲ್ಪನೆಯನ್ನು ಯಾರೂ ಮೆಚ್ಚದಿರಲಾರರು.

ಮೂರ್ರನೆಯ ಅಧ್ಯಾಯದಲ್ಲಿ ತಂದೆಯಾದ ಬುಕ್ಕರಾಯನು ಕಂಪಣನಿಗೆ ನೀಡಿದ ಉಪದೇಶವು ಬಾಣಕಾದಂಬರಿಯೊಳಗಿನ 'ಶುಕನಾಸೋಪದೇಶ'ವನ್ನು ನೆನಪಿಗೆ ತರುತ್ತದೆ. ಇದನ್ನು ಇಂದಿಗೂ ತರುಣರು ಓದಿ ಮಾರ್ಗದರ್ಶನ ಪಡೆಯಬಹುದಾಗಿದೆ. ಬುಕ್ಕರಾಯನು ಹೇಳಿದ ಈ ಕೆಳಗಿನ ಮಾತನ್ನು ಪ್ರತಿಯೊಬ್ಬ ಹಿರಿಯನೂ ಇಂದು ತರುಣರಿಗೆ ನೆನಪು ಮಾಡಿಕೊಟ್ಟರೆ ಅವರಿಗೂ ಸಮಾಜಕ್ಕೂ ಒಳಿತಾಗುವದು:

ಧಿಯಃ ಪ್ರಕಾಶಾದುಪದೇಶಸಂಭೃತಾತ್ ತಮೋ
ಹಿ ತಾರುಣ್ಯವಿಜೃಂಭಿತಂ ಜನಾಃ।
ಸಮುಜ್ಝಿತುಂ ತಾತ ಭವಂತಿ ಪಾರಿತಾಸ್ತದೇತದಾ-
ಕರ್ಣಯಿತುಂ ತ್ವಮರ್ಹಸಿ॥

ತಾರುಣ್ಯ ಬಂದಾಗ ಬುದ್ಧಿಗೆ ಕತ್ತಲೆ ಕವಿದು ಸರಿ ಯಾವದು ತಪ್ಪು ಯಾವದು ಎಂಬುದು ತಿಳಿಯುವದಿಲ್ಲ. ಈ ಕತ್ತಲಿ ಹೋಗಬೇಕಾದರೆ ಹಿರಿಯರ ಉಪದೇಶವನ್ನು ಕೇಳಬೇಕು. ಉಪದೇಶದಂತೆ ನಡೆದರೆ ತರುಣರು ಹಿತವನ್ನು ಸಾಧಿಸುತ್ತಾರೆ ಎಂಬೀ ಮಾತು ನಿತ್ಯ ಸತ್ಯವಾದುದು. ಇದರ ಮುಂದಿನ ಸಂಪೂರ್ಣ ಉಪದೇಶವು ಇಂದಿನ ತರುಣವಿದ್ಯಾರ್ಥಿಗಳ ಪಠ್ಯ ಕ್ರಮದಲ್ಲಿ ಸೇರಲು ಯೋಗ್ಯವಾಗಿದೆ.

ನಾಲ್ಕನೆಯ ಮತ್ತು ಕೊನೆಯ ಅಧ್ಯಾಯಗಳಲ್ಲಿ ಬರುವ ಸೈನ್ಯದ ಕೂಚಿನ ವರ್ಣನೆಯೂ ಯುದ್ಧದ ಬಣ್ಣನೆಯೂ ಗಂಗಾದೇವಿಯು ದಿಗ್ವಿಜಯದ ಸಮಯದಲ್ಲಿ ಕಂಪಣನೊಡನೆ ಹೋಗಿರಬೇಕೆಂಬುದನ್ನು ಬಲವಾಗಿ ಸಮರ್ಥಿಸುತ್ತವೆ. ಸೈನ್ಯದ ಕೋಲಾಹಲದ ಈ ವರ್ಣನೆಯು ಗಂಗಾದೇವಿಯ ಪ್ರತಿಭೆಯನ್ನೂ ಸಂಸ್ಕೃತ ಭಾಷೆಯ ಮೇಲಿನ ಅವಳ ಪ್ರಭುತ್ವವನ್ನೂ ಎತ್ತಿ ತೋರಿಸುತ್ತದೆ:

ಪೋಷಿತೋ ಹಯಹೇಷಾಭಿರ್ಬೃಂಹಿತೋ
ಗಜಬೃಂಹಿತೈಃ।
ವರ್ಧಿತಸ್ತೂರ್ಯನಿಧ್ವಾನೈಃ ಕೋಽಪಿ ಕೋಲಾಹಲೋಽ
ಭವತ್॥

ಸೈನಿಕರ ಕೋಲಾಹಲ ಮೊದಲೇ ಕಿವಿಗಡಚಿಕ್ಕುವಂತಿತ್ತು ಆದಕ್ಕೆ ಕುದುರೆಗಳ ಕೆನೆತ, ಆನೆಗಳ ಘೀಳಿಡುವಿಕೆ ಮತ್ತು ರಣವಾದ್ಯಗಳ ಗರ್ಜನೆ ಸೇರಿದರೆ ಕೇಳಬೇಕೇ?

ಗಂಗಾದೇವಿಯ ಕಲ್ಪನಾವೈಭವಕ್ಕೆ ಒಂದು ಚಿಕ್ಕ ಉದಾಹರಣೆ ನೋಡಿರಿ. ಒಂದೇ ಸಮಯದಲ್ಲಿ ಸೂರ್ಯಗ್ರಹಣ -ಚಂದ್ರಗ್ರಹಣ ಉಂಟಾಗಲು ಸಾಧ್ಯವೇ? ನೀವು "ಇಲ್ಲ" ವೆನ್ನಬಹುದು. ಆದರೆ ಕಂಪಣನ ಸೈನ್ಯವು ಎಬ್ಬಿಸಿದ ಧೂಳಿನಿಂದ ಅದು ಸಾಧ್ಯವಾಯಿತೆಂದು ಗಂಗಾದೇವಿ ಬಣ್ಣಿಸುತ್ತಾಳೆ:

ಪ್ರತಾಪಾದಿತ್ಯಕೀರ್ತೀಂದುಯುಗಪದ್ ಗ್ರಾಸಲಾಲಸಃ|
ಪರಾಗಃ ಪರಭೂಪಾನಾಮುಪರಾಗೋಽಭವನ್ನವಃ||
೭-೨೨

ಆ ಧೂಳನಿಂದ ವೈರಿರಾಜರ ಪ್ರತಾಪವೆಂಬ ಸೂರ್ಯ ಮತ್ತು ಕೀರ್ತಿಯೆಂಬ ಚಂದ್ರ- ಇಬ್ಬರಿಗೂ ಗ್ರಹಣ ಹಿಡಿಯಿತು!

ಸೋತು ಓಡುತ್ತಿದ್ದ ತಮಿಳಾಧಿಪ ಸಂಭವರಾಯನ ಸೈನ್ಯದಲ್ಲಿದ್ದ ಗೊಂದಲವನ್ನು ನೋಡಿ ಕರ್ಣಾಟಯೋಧರು ನಗಹತ್ತಿದರಂತೆ. ಓಡುತ್ತಿದ್ದ ಕೆಲ ಸೈನಿಕರು ಕರ್ಣಾಟ ಯೋಧರಿಂದ ತಪ್ಪಿಸಿಕೊಳ್ಳಲು ನೆಲಕ್ಕೆ ಬಿದ್ದ ಹೆಣಗಳ ನಡುವೆ ಹೆಣಗಳಾಗಿ ಮಲಗಿದರಂತೆ; ಆದರೆ ಅಲ್ಲಿ ನರಿಗಳು ಬಂದು ಬಾಯಿ ಹಾಕತೊಡಗಿದ ಕೂಡಲೇ ಹೆದರಿ ಮತ್ತೆ ಓಡಲು ಪ್ರಾರಂಭಿಸಿದರಂತೆ:

ಹತಾನುಕಾರಿಣಃ ಕೇಚಿತ್ ಕ್ಷಿತೌ ನಿಪತಿತಾಸ್ತತಃ।
ಕ್ರೋಷ್ಟುಭಯೇನ ಧಾವಂತಃ ಕರ್ಣಾಟಾನ್
ಪರ್ಯಹಾಸಯನ್| ೭-೬೪

ಇನ್ನು ಕೆಲವರ ಪಾಡು ಕೇಳುವದೇ ಬೇಡ. ಅವರು ಓಡುತ್ತಿದ್ದಾಗ ಹಿಂದೆ ಹಿಂದೆ ಅವರ ನೆರಳೂ ಓಡಿಬರುತ್ತಿತ್ತು. ಆ ನೆರಳನ್ನೇ ಕರ್ಣಾಟಸೈನಿಕರೆಂದು ಭಾವಿಸಿ ಬದುಕುಳಿಯ

ಬೇಕೆಂಬ ಒಂದೇ ಬಯಕೆಯಿಂದ ಹಿಂತಿರುಗಿ ಬೆರಳು ಕಚ್ಚಿ ತಮ್ಮ ನೆರಳಿಗೇ ನಮಸ್ಕರಿಸಿಬಿಟ್ಟರಂತೆಃ

ಛಾಯಾಮೇವಾತ್ಮನಃ ಕೇಚಿದ್ ಧಾವಂತೋ ಭೀತಿಭಾವಿತಾಃ।
ಆಶಾತಿಶಂಕಯಾ ಕಷ್ಟಂ ದಷ್ಟಾಂಗುಲಿ ವವಂದಿರೇ॥
೭_೬೬

ಪ್ರತ್ಯಕ್ಷಯುದ್ಧದ ಈ ಕೆಲವು ಚಿತ್ರಗಳನ್ನು ನೋಡಿರಿ:

ಕರೇಣ ಕಂಚಿತ್ಪದಯೋರ್ಗೃಹೀತ್ವಾ ಕ್ಷಿಪ್ತಂ ದವೀಯೋ ವಿಯತಿ ದ್ವಿಪೇಂದ್ರ:।
ಪತಂತಮಾಚ್ಛಿನ್ನಕೃಪಾಣಯಷ್ಟಿ: ಪ್ರತ್ಯೈಚ್ಛದುಚ್ಚೈರ್ದಶನದ್ವಯೇನ॥
(ಕೊನೆಯ ಸರ್ಗ)

ಆನೆಯು ಕಾಲಾಳನ್ನು ಎರಡು ಕಾಲುಗಳಿಂದ ಹಿಡಿಯಿತು ಮತ್ತು ಅವನನ್ನು ಸೊಂಡಿಲಿನಿಂದ ಜೋರಾಗಿ ಮೇಲಕ್ಕೆ ಎಸೆಯಿತು. ಕೆಳಗೆ ಬೀಳುತ್ತಿದ್ದಾಗ ಅವನನ್ನು ಪುನ: ಹಿಡಿಯ ಬೇಕೆಂದು ಆ ಆನೆ ಬಯಸಿತು. ಆದರೆ ಅವನೂ ಸಾಮಾನ್ಯ ನಾಗಿರಲಿಲ್ಲ. ಆನೆಯ ಸೊಂಡಿಲನ್ನು ಅವನು ತಪ್ಪಿಸಿಕೊಂಡನಷ್ಟೇ ಅಲ್ಲ, ಕೆಳಕ್ಕೆ ಬೀಳುವ ಮೊದಲು ಅದರ ಎರಡೂ ದಂತಗಳನ್ನು ಕಡಿದುಬಿಟ್ಟನು.

ಇನ್ನೊಬ್ಬ ಕಾಲಾಳು ಗೈದ ಚಮತ್ಕಾರ ಕೇಳಿರಿಃ ಇವನನ್ನೂ ಆನೆಯೊಂದು ಹಿಡಿದು ಮೇಲಕ್ಕೆಸೆಯಿತು. ಆದರೆ ಅವನು ಮಾತ್ರ ಕೆಳಗೆ ಬರಲೇ ಇಲ್ಲ. ಹಾಗಾದರೆ ಏನು ಮಾಡಿದ? ಮೇಲಿನಿಂದಲೇ ಆನೆಯ ಮೇಲೆ ಜಿಗಿದುಬಿಟ್ಟ ಮತ್ತು ಅದರ

ಮೇಲಿನ ಯೋಧನನ್ನು ಕೊಂದು ತಾನೇ ಆ ಆನೆಯ ಮೇಲೆ ಸವಾರಿ ಮಾಡತೊಡಗಿದಃ—

ಕ್ಷಿಪ್ತೋ ಗಜೇನೋರ್ಧ್ವಮಸಿದ್ವಿತೀಯಃ ಸ್ಕಂಧೇ ನಿಪತ್ಯಾಸ್ಯ ಪುರಸ್ಸರಸ್ಯೇ।
ನಿಪಾತ್ಯ ಚಾಧೋರಣಮಭ್ಯಮಿತ್ರಂ ಗಜಾಧಿರೋಹ: ಸ್ವಯಮೇವ ಜಜ್ಞೇ॥
(ಕೊ. ಸ)

ಎರಡೂ ಕಡೆ ಚೂಪಾದ ಭಲ್ಲೆ ಎದೆಗೆ ಬಂದು ಚುಚ್ಚಿದಾಗ ಕಾಲಾಳುವೊಬ್ಬನು ಅದನ್ನು ತನ್ನ ಎದೆಗೆ ಚುಚ್ಚಿಕೊಂಡಿದ್ದಂತೆಯೇ ಓಡಿಹೋಗಿ ಎಸೆದವನನ್ನೇ ಅಪ್ಪಿಕೊಂಡುಬಿಟ್ಟನು. ಆಗ ಆ ಭಲ್ಲೆಯ ಇನ್ನೊಂದು ತುದಿ ಅವನ ಎದೆಗೆ ಚುಚ್ಚಿತು:

ಕುಂತೇನ ಕಶ್ಚಿತ್ ದ್ವಿಷತಾ ವಿಭಿನ್ನಸ್ತಥೈವ ಸಂಶ್ಲೇಷಮುಪುಷ್ಯ ಯಾತಃ।
ಭಿಂದನ್ನುರಸ್ತೇನ ಚಮತ್ಕೃತೋಽಭೂದ್ಗುಣೇಷು ಕೋ ಮಾತ್ಸರ್ಯಮಾದಧಾತಿ॥
(ಕೊ. ಸ)

ಆಗ ಅವನು ಆ ಕಾಲಾಳುವಿನ ಕೆಚ್ಚನ್ನು ಮೆಚ್ಚಿಕೊಂಡನಂತೆ. ಮತ್ತು ಕವಯಿತ್ರಿ ಕೇಳುತ್ತಾಳೆಃ "ಗುಣಕ್ಕೆ ಮಾತ್ಸರ್ಯವುಂಟೇ?" ಸರ್ವಥಾ ಇಲ್ಲವೆಂದು ನಾವು ಉತ್ತರಿಸಲೇಬೇಕು.

ಐದನೆಯ ಸರ್ಗದ ಪ್ರಾರಂಭದಲ್ಲಿ ಕಂಪಣನ ರಾಜ್ಯಭಾರದ ವರ್ಣನೆಯಿದೆ. ಅವನು ಇನ್ನೊಬ್ಬ ವಿಷ್ಣುವೆಂದು ಪ್ರಜೆಗಳು ಭಾವಿಸಿದರಂತೆ:—

ಅರಿಬಲಾಪಹಮಾಶ್ರಿತನಂದನಂ ಸುಮನಸಾಂ ಮನಸ, ಪ್ರಿಯದಾಯಿನಮ್।

ವಸುಮತೀಮವತೀರ್ಣ ವಿಮಾಪರಂ ಹರಿಮಮಂಸತ
ತಂ ಸತತಂ ಪ್ರಜಾಃ॥
೫—೨

ವಿಷ್ಣುವಿನಂತೆ ಕಂಪಣನು ವೈರಿಗಳ ಸೈನ್ಯವನ್ನು ಸದೆಬಡಿಯುತ್ತಿದ್ದನು: ಶರಣಾಗತರಿಗೆ ರಕ್ಷಕನಾಗಿದ್ದನು; ಮತ್ತು ಸಜ್ಜನರ ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತಿದ್ದನು.

ಅದೇ ಸರ್ಗದಲ್ಲಿ ಸಂಸ್ಕೃತ ಮಹಾಕಾವ್ಯಗಳಲ್ಲಿ ಕಂಡು ಬರುವ ಋತುಗಳ ವರ್ಣನೆ ಬಂದಿದೆ ಮತ್ತು ಅದು ಶೃಂಗಾರ ರಸದಿಂದ ಕೂಡಿದೆ. ಇದು ಬೇಸಿಗೆಯ ವರ್ಣನೆಯಲ್ಲಿ ಒಂದು ಶ್ಲೋಕ:—

ಸರಸಚಂದನಧಾರಿಷು ಮೌಕ್ತಿಕತ್ರಿಸರನಿರ್ಝರಹಾರಿಷು
ಸುಭ್ರುವಾಮ್|
ಕುಚತಟೀಷು ನಿದಾಘನಿಪೀಡಿತೋ ಧೃತಿಮಧಾತ್
ಕುಸುಮಾಯುಧಕುಂಜರಃ॥ (೫—೧೯)

ಇಲ್ಲಿ ಮನ್ಮಥನನ್ನು ಆನೆಗೆ ಹೋಲಿಸಲಾಗಿದೆ. ಅವನು ಬೇಸಿಗೆಯ ಬೇಗೆಯಿಂದ ಬೆಂದು ಸುಂದರಿಯರ ಸ್ತನತಟಗಳ ಮೇಲೆ ವಿಶ್ರಾಂತಿ ಪಡೆದ. ಆ ಸ್ತನತಟಗಳು ಚಂದನಲೇಪದಿಂದಲೂ ಮುತ್ತಿನ ಹಾರಗಳಿಂದಲೂ ತಂಪಾಗಿದ್ದವು.

ಮಳೆಗಾಲವು ಕಂಪಣನ ರತಿಕ್ರೀಡೆಗೆ ಸಹಾಯ ಮಾಡಿತಂತೆ:—

ನವವಧೂಪರಿರಂಭಣದೋಹಲಾನ್ಯನುಪದಂ ನಿನದೈ:
ಪ್ರತಿಪಾದಯನ್।
ಅಲಭತ ಕ್ಷಣದಾಸು ಘನಾಗಮೋ ನರಪತೇ: ಕಿಲ
ನರ್ಮಸುಹೃತ್ಪದಮ್॥ (೫-೩೭)

ನವವಧುಗಳು ನಾಚಿಕೆಯಿಂದ ತಾವಾಗಿ ಕಂಪಣನನ್ನು ಆಲಿಂಗಿಸುತ್ತಿರಲಿಲ್ಲವಂತೆ. ಆದರೆ ಮಳೆಗಾಲದ ರಾತ್ರಿಗಳಲ್ಲಿ ಗುಡುಗಿನ ಗರ್ಜನೆ ಕೇಳಿದಾಗ ಅವರು ಅವನನ್ನು ಗಾಢವಾಗಿ ಆಲಿಂಗಿಸಿದರಂತೆ. ಹೀಗೆ ಮಳೆಗಾಲವು ಕಂಪಣನಿಗೆ ಸಹಾಯಕ ವಾಯಿತು.

ಚಳಿಗಾಲದಲ್ಲಿ ಕಂಪಣನ ಬಳಿಯಿದ್ದ ಲಲನೆಯರಿಗೆ ಚಳಿಯೂ ಆಗುತ್ತಿತ್ತು; ಬೆವರೂ ಸುರಿಯುತ್ತಿತ್ತು:—

ಅಪದಿಶನ್ ಶಿಶಿರಾನಿಲಮಂಗಕೈ: ಪುಲಕಿತೈರ್ನೃಪತೇ:
ಸವಿಧಂ ಗತ:।
ಮದನಸಂಭೃತಘರ್ಮಜಪಯು: ಕಣೈರ್ಭೃಶಮಲಜ್ಜತ
ಮುಗ್ಧವಧೂಜನ:॥ (೫—೪೯)

ನವವಿವಾಹಿತ ಮುಗ್ಧವಧುಗಳಿಗೆ ಕಂಪಣನ ಸಾಮಿಪ್ಯದಿಂದ ಮೈ ಪುಳಕಿತವಾಯಿತು. ಈ ನಿಜವಾದ ಕಾರಣವನ್ನು ಒಪ್ಪಿಕೊಳ್ಳಲು ನಾಚಿಕೆಯಾಗಿ ಅವರು ಚಳಿಯಿಂದ ಮೈಪುಳಕಿತವಾಯಿತೆಂದರು. ಆದರೆ ಅದೇ ಹೊತ್ತಿನಲ್ಲಿ ಕಾಮಬಾಧೆಯಿಂದ ಅವರ ಮೈಮೇಲೆ ಬೆವರಿನ ಹನಿಗಳು ಕಾಣಿಸಿಕೊಂಡವು. ಇದಕ್ಕೆ ಯಾವ ನೆಪವೂ ಕೊಡಲಾರದೇ ಅವರು ಲಜ್ಜಿತರಾದರು.

ವಸಂತಋತುವಿನಲ್ಲಿ ಆ ಸುಂದರಿಯರು ಕಾಮದೇವನ ಪೂಜೆ ಮಾಡಲು ಅವನ ಚಿತ್ರ ಬರೆಯಲು ಪ್ರಯತ್ನಿಸಿದರು; ಆದರೆ ಅದು ಸಾಧ್ಯವಾಗಲಿಲ್ಲ ಏಕೆ ಗೊತ್ತೇ? ಕೇಳಿರಿ:—

ಸುತನವ: ಫಲಕೇಷು ಮಧೂತ್ಸವೇ ರತಿಪತಿಂ
ಪರಿಲೇಖಿತುಮುದ್ಯತಾ:।
ಹೃದಯಗೋಚರತಾಮನಿಶಂ ಗತಂ ಹರಿಹರಾತ್ಮಜಮೇವ
ಸಮಾಲಿಖನ್ ॥ (೫-೭೧)

ಅವರು ಪ್ರಯತ್ನಿಸಿದ್ದು ಕಾಮದೇವನ ಚಿತ್ರಬರೆಯಲು; ಆದರೆ ಅಲ್ಲಿ ಮೂಡಿದ್ದು ಕಂಪಣನ ಚಿತ್ರ. ಏಕೆಂದರೆ ಅವರ ಹೃದಯದಲ್ಲಿ ನೆಲೆಸಿದ್ದ ಕಂಪಣನೇ ಅವರಿಗೆ ಯಾವಾಗಲೂ ಕಾಣಿಸುತ್ತಿದ್ದನು.

ಆರನೆಯ ಸರ್ಗದಲ್ಲಿ ಬರುವ ಜಲಕ್ರೀಡೆಯ ವರ್ಣನೆಯೂ ಮನೋಹರವಾಗಿದೆ. ಆದರೆ ನಮ್ಮ ದುರ್ದೈವದಿಂದ ಈ ಸರ್ಗದ ೬೯ ರಲ್ಲಿ ೪೪ (೧೩ರಿಂದ ೫೬) ಶ್ಲೋಕಗಳು ದೊರೆತಿಲ್ಲ. ಜಲ ಕ್ರೀಡೆಯ ಬಳಿಕ ಕಂಪಣನ, ಕಣ್ಣಿಗೆ ಹಬ್ಬವನ್ನುಂಟುಮಾಡಿದ ನೋಟ ನೋಡಿರಿ:—

ಸ್ಫುಟನಖರದನಾಂಗಮಂಗನಾನಾಂ
ಪರಿಗಲದಾರ್ದ್ರದುಕೂಲದರ್ಶಿತೋರು ।
ವಪುರನುಕಲಮೈಕ್ಷತ ಕ್ಷಿತೀಶೋ
ಜಲಕಣದಂತುರದೀರ್ಘಕುಂತಲಾಗ್ರಮ್ ॥(೬.೬೭)

ಜಲಕ್ರೀಡೆಯ ಬಳಿಕ ಅವನ ರಾಣಿಯರೆಲ್ಲ ಕೊಳದೊಳಗಿಂದ ಹೊರಗೆ ಬರುವಾಗ ರತಿಕ್ರೀಡೆಯ ಸಮಯದಲ್ಲಿ ಅವರ ಮೈ ಮೇಲೆ ಉಗುರು ಮತ್ತು ಹಲ್ಲುಗಳಿಂದುಂಟಾದ ಗಾಯಗಳೂ ಒದ್ದೆ ಬಟ್ಟೆಯೊಳಗಿಂದ ಅವರ ತೊಡೆಗಳೂ ಅವನಿಗೆ ಸ್ಪಷ್ಟವಾಗಿ ಕಾಣಿಸಿದವು. ಅವರ ಉದ್ದವಾದ ಕೂದಲುಗಳಿಂದ ನೀರಿನ ಹನಿಗಳು ತೊಟ್ಟಿಕ್ಕುವುದನ್ನು ನೋಡಿಯೂ ಅವನಿಗೆ ಹರುಷವಾಯಿತು.

ಏಳನೆಯ ಸರ್ಗದಲ್ಲಿ ಸಾಯಂಕಾಲ ಮತ್ತು ರಾತ್ರಿಗಳ ವರ್ಣನೆಯಿದೆ. ಸಾಯಂಕಾಲದಲ್ಲಿ ಸೂರ್ಯನಿಗೆ ಮೂಡಣ ದಿಗ್ದೇವಿಯ ವಿರಹದಿಂದುಂಟಾದ ತಾಪವು ಪಡುವಣ ದಿಗ್ದೇವಿಯ ಸನ್ನಿಧಿಯಿಂದ ಶಮನವಾಯಿತಂತೆ. ಆಗ ಗಂಗಾದೇವಿ ಉದ್ಗರಿಸುತ್ತಾಳೆ– "ಕಾಮಿಗಳ ಹೃದಯವನ್ನು ಯಾರು ಬಲ್ಲರು?"–

ಪ್ರಥಮಾಂ ಹರಿತಂ ಪ್ರಭಾಕರೋ
ವಿರಹಯ್ಯಾತ್ಮನಿ ತಾಪಮಾಪ ಯಾಮ್।
ಅಪರಾಮುಪಗಮ್ಯ ತಂ ಜಹೌ,
ಹೃದಯಂ ಕಃ ಖಲು ವೇತ್ತಿ ರಾಗಿಣಾಮ್॥(೭-೬)

ಹಗಲು ಕಳೆದು ರಾತ್ರಿ ಬರುವ ಘಟನೆಯ ಈ ಕೆಳಗಿನ ವರ್ಣನೆಯು ಕವಯಿತ್ರಿಯ ಕಲ್ಪನಾ ಸಾಮರ್ಥ್ಯಕ್ಕೆ ಉತ್ತಮ ಉದಾಹರಣೆಯಾಗಿದೆ:—

ದಿನವೇಷಮಪಾಸ್ಯ ಯಾಮಿನೀವಪುಷಾ
ಕಾಲನಟಸ್ಯ ನೃತ್ಯತಃ।
ದದೃಶೇ ಜಗತಾ ಪಿತೃಪ್ರಸೂರ್ದಿವಿ
ನೇಪಥ್ಯಪಟೀವ ಪಾಟಲಾ॥(೭-೧೯)

ಸಂಧ್ಯಾಕಾಲವೆಂದರೆ ಸೃಷ್ಟಿಕರ್ತ ನಿರ್ಮಿಸಿದ ಕೆಂಪು ತೆರೆಯಂತೆ; ಈ ತೆರೆಯ ಮುಂದೆ ನರ್ತಿಸುವವನು ಕಾಲನೆಂಬ ನಟನು. ಅವನು ಹಗಲಿನ ವೇಷವನ್ನು ಕಳಚಿ ರಾತ್ರಿಯ ವೇಷವನ್ನು ತೊಡುತ್ತಾನಂತೆ. ಆಗ ರಾತ್ರಿಯಾಗುತ್ತದೆ.

ತಾರೆಗಳು ಮೂಡಿದ ಕತ್ತಲುರಾತ್ರಿಯ ಈ ಸೊಗಸಾದ ವರ್ಣನೆಯು ಗಂಗಾದೇವಿಯ ಕಲ್ಪನಾ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ:

ಅವಪತ್ ಕಿಮು ಕಾಲಕರ್ಷಕಸ್ತಿಮಿರಾಂಭಃ—
ಕಲುಷೇ ನಭಸ್ತಲೇ।
ವಿಮಲಾಮುಡುಬೀಜಮಂಡಲೀಂ
ನವಚಂದ್ರಾತಪಸಸ್ಯಸಿದ್ಧಯೇ॥ (೭-೨೯)

ಕತ್ತಲೆಯಿಂದ ಕಪ್ಪಾದ ಆಕಾಶವೆಂಬ ಹೊಲದಲ್ಲಿ ಕಾಲನೆಂಬ ರೈತನು ಬೆಳದಿಂಗಳಿನ ಪೈರನ್ನು ಪಡೆಯಲು ತಾರೆಗಳೆಂಬ ಬೀಜಗಳನ್ನು ಬಿತ್ತಿರುವ

ವಿರಹಿಗಳಿಗೆ ಸಂತಾಪವನ್ನುಂಟುಮಾಡುವ ಚಂದ್ರನಲ್ಲಿ ಬಿಸಿ ಎಲ್ಲಿಂದ ಬಂತು ಗೊತ್ತೇ? ಕೇಳಿರಿ:-

ಅನುದರ್ಶಮನುಪ್ರವೇಶತಸ್ತಪನಾಚ್ಛಕ್ತಿಮವಾಪ
ತಾಪಿನೀಮ್।
ನಿಯತಂ ಹಿಮದೀಧಿತಿರ್ಯತಃ ಕ್ಷಮತೇ ತಾಪಯಿತುಂ
ವಿಯೋಗಿನಃ॥ (೭-೪೯)

ಪ್ರತಿ ಅಮಾವಾಸ್ಯೆಗೂ ಚಂದ್ರನು ಸೂರ್ಯನಲ್ಲಿ ಸೇರಿಹೋಗು ತ್ತಾನಲ್ಲವೆ? ಆಗ ಅವನು ಸೂರ್ಯನ ಬಿಸಿಯನ್ನು ಪಡೆದುಕೊಂಡು ಹೊರಬಂದು ವಿರಹಿಗಳಿಗೆ ಸಂತಾಪ ನೀಡುತ್ತಾನಂತೆ.

ಎಂಟನೆಯ ಸರ್ಗದಲ್ಲಿ, ಮುಸಲ್ಮಾನರ ಆಕ್ರಮಣಕ್ಕೆ ತುತ್ತಾಗಿ ನರಳುತ್ತಿದ್ದ ಮಧುರೆಯ ವರ್ಣನೆ ಮಾಡುತ್ತ ಗಂಗಾ ದೇವಿಯು ತನ್ನಲ್ಲಿ ಮನೆಮಾಡಿಕೊಂಡಿರುವ ಸಂಸ್ಕೃತ ಭಕ್ತಿಯನ್ನು ಪರೋಕ್ಷವಾಗಿ ಪ್ರಕಟಿಸಿದ್ದಾಳೆ:—

ನ ತಥಾ ಕಟುಘೂತ್ಕೃತಾದ್ ವ್ಯಥಾ ಮೇ ಹೃದಿ
ಜೀರ್ಣೋಪವನೇಷು ಘೂಕಲೋಕಾತ್।
ಪರಿಶೀಲಿತಪಾರಸೀಕವಾಗ್ಭ್ಯೋ ಯವನಾನಾಂ ಭವನೇ
ಯಥಾ ಶುಕೇಭ್ಯ॥

"ಯವನರ ಮನೆಗಳಲ್ಲಿ ಗಿಳಿಗಳ ಬಾಯಿಂದ ಕೇಳಿಬರುವ ಪರ್ಶಿಯನ್ ಮಾತುಗಳಿಂದ ನನ್ನ ಹೃದಯದಲ್ಲಿ ಉಂಟಾಗುವ ವೇದನೆಯು ಹಾಳುಬಿದ್ದ ತೋಟಗಳಲ್ಲಿ ಕಿರಿಚುತ್ತಿರುವ ಗೂಗೆಗಳ ಕೂಗಿನಿಂದಲೂ ಉಂಟಾಗುವದಿಲ್ಲ".

ಚಿಕ್ಕ-ಚಿಕ್ಕ ವಾಕ್ಯಗಳಲ್ಲಿ ಅರ್ಥಗರ್ಭಿತವಾದ ಮಾತುಗಳನ್ನು ಹೇಳಬಲ್ಲ ಭಾಷಾಪ್ರಭುತ್ವವೂ ಗಂಗಾದೇವಿಯಲ್ಲಿತ್ತು. ಉದಾ- ಹರಣೆಯಾಗಿ ಈ ಶ್ಲೋಕ ನೋಡಿರಿ:-

ಶ್ರುತಿರಸ್ತಮಿತಾ, ನಯಃ ಪ್ರಲೀನೋ, ವಿರತಾ ಧರ್ಮ
ಕಥಾ, ಚ್ಯುತಂ ಚರಿತ್ರಮ್
ಸುಕೃತಂ ಗತಮ್, ಆಭಿಜಾತ್ಯಮಸ್ತಂ, ಕಿಮಿವಾನ್ಯತ
ಕಲಿರೇಕ ಏವ ಧನ್ಯಃ

"ಶಾಸ್ತ್ರಾಭ್ಯಾಸ ಕೊನೆಗೊಂಡಿತ್ತು: ವಿನಯ ಅಡಗಿತ್ತು; ಧರ್ಮ ಮಾತು ಲೋಪವಾಗಿತ್ತು; ಚಾರಿತ್ರ್ಯ ಕೆಟ್ಟುಹೋಗಿತ್ತು: ಸತ್ಕೃ ಮುಗಿದಿತ್ತು; ಕುಲೀನತೆ ಮರೆಯಾಗಿತ್ತು; ಇನ್ನೇನು? ಕ ಯೊಬ್ಬನೇ ಕೃತಾರ್ಥನಾಗಿದ್ದನು."

ಈ ರೀತಿಯಾಗಿ ನಾನಾವಿಧ ಕಾವ್ಯಗುಣಗಳಿಂದ ಕೂಡಿ ಈ ಮಹಾಕಾವ್ಯವು ಗಂಗಾದೇವಿಗೆ ಅಪಾರ ಕೀರ್ತಿಯನ್ನು ತಂದು ಕೊಟ್ಟಿದೆ. ಈ ಮಹಾಕಾವ್ಯದಲ್ಲಿ ಗಂಗಾದೇವಿಯ ಪ್ರತಿಭೆ, ವಿದ್ವತ್ತೆ ರಸಿಕತೆ, ಲೋಕಾನುಭವ, ವರ್ಣನಾಕೌಶಲ, ಕಲ್ಪನಾಸಾಮರ್ಥ್ಯ ಭಾಷಾ ಪ್ರಭುತ್ವ–ಮೊದಲಾದವು ರಸವತ್ತಾಗಿ ಮೂಡಿಬಂದಿರು ವದರಿಂದ ರಸಿಕರು ಓದಿ ಅಥವಾ ಕೇಳಿ ಆನಂದಪಡಬೇಕಾದ ಕೃತಿ ಇದು.

## ಐತಿಹಾಸಿಕ ಮಹತ್ವ

ಮೇಲಾಗಿ 'ಮಧುರಾವಿಜಯ' ಒಂದು ಐತಿಹಾಸಿ ಕಾವ್ಯ. ಕ್ರಿಸ್ತಶಕ ೧೩೬೦ ರಿಂದ ೧೩೭೧ ರ ವರೆಗೆ ದಕ್ಷಿ ಭಾರತದಲ್ಲಿ ನಡೆದ ಮಹತ್ವದ ಘಟನೆಗಳ ವರ್ಣನೆ ಇದರಲ್ಲಿ ಬಂದಿದೆ. ಗಂಗಾದೇವಿಯು ಕವಯಿತ್ರಿಯಾದರೂ ಬಹಳಷ್ಟು ಅತಿಶಯೋಕ್ತಿಗೆ ಆಸ್ಪದ ನೀಡದೆ, ತಾನು ನೋಡಿದ ಘಟನೆಗಳನ್ನು ಯಥಾವತ್ತಾಗಿ ಬಣ್ಣಿಸಿರುವಳು. ಆಗಿನ ಕಾಲದ ಇತಿಹಾಸದ

ಮೇಲೆ ಬೆಳಕನ್ನು ಚೆಲ್ಲುವ ಶಾಸನಗಳೂ ವಿದೇಶಿ ಪ್ರವಾಸಿಕರ ಅನುಭವ ಕಥನಗಳೂ ಗಂಗಾದೇವಿಯ ವರ್ಣನೆಗಳು ವಸ್ತುಸ್ಥಿತಿಯನ್ನೇ ಚಿತ್ರಿಸುತ್ತವೆಯೆಂಬುದಕ್ಕೆ ಸಾಕ್ಷಿ ನೀಡುತ್ತವೆ. ಸೀವೆಲ್ (Sewell) ಎಂಬ ವಿದ್ವಾಂಸರು ದಕ್ಷಿಣ ಭಾರತದ ಶಿಲಾಶಾಸನಗಳನ್ನು ಅಭ್ಯಸಿಸಿ ಬರೆದ ಗ್ರಂಥದಲ್ಲಿ ಮುಸಲ್ಮಾನ ಅರಸರ ಪ್ರಜಾಪೀಡನೆಯನ್ನು ಕುರಿತು ಈ ಮಾತುಗಳನ್ನು ಬರೆದಿದ್ದಾರೆ:-

"ಶತಮಾನಗಳುದ್ದಕ್ಕೂ ಯುದ್ಧಗಳು ಅವಿರತವಾಗಿ ನಡೆಯುತ್ತಿದ್ದರೂ ಅವು ಹಿಂದುಗಳ ನಡುವೆ ನಡೆಯುತ್ತಿದ್ದವು. ಮತ್ತು ಜನಸಾಮಾನ್ಯರಿಗೆ ಆ ಮೂಲಕ ಪೀಡೆಯಾಗುತ್ತಿದ್ದರೂ ಬ್ರಾಹ್ಮಣರು ಮತ್ತು ಗುಡಿಗಳು ಅದರಿಂದ ದೂರವಾಗಿದ್ದವು. ಆದರೆ ಬಳಿಕ ಹಿಂದುಗಳ ಮೇಲೆ ಕೊಳ್ಳೆ ಹೊಡೆಯುವ ಮುಸಲ್ಮಾನರು ದಾಳಿ ಮಾಡಿದರು. ಅವರು ಪಟ್ಟಣಗಳನ್ನು ಸೂರೆ ಮಾಡಿದರು; ಜನರ ಕೊಲೆಗೈದರು; ಪುರಾತನ ದೇವಾಲಯಗಳನ್ನು ಧ್ವಂಸ ಮಾಡಿದರು; ತಮ್ಮ ದೇವರ ಹೆಸರಿನಲ್ಲಿ ಮತ್ತು ದೇವರ ಕೀರ್ತಿಗಾಗಿ ಪೂಜ್ಯ ಬ್ರಾಹ್ಮಣರನ್ನು ಕೂಡ ಕೊಂದರು. ಅವರ ಕೃತಿಗಳು ರಾಕ್ಷಸೀ ಕೃತ್ಯಗಳಾಗಿದ್ದವು. ಪರಿಣಾಮವಾಗಿ ಈ ಭಯಂಕರ ಗಂಡಾಂತರದಿಂದ ಇಡಿಯ ದಕ್ಷಿಣ ಭಾರತವು ಕ್ಷೋಭೆಗೊಂಡಿತ್ತು. ಭವಿಷ್ಯದಲ್ಲಿ ಇಂತಹ ಗಂಡಾಂತರದಿಂದ ದೇಶವನ್ನು ರಕ್ಷಿಸಲು ಯಾವುದಾದರೂ ಹಿಂದೂ ಶಕ್ತಿಯು ತಲೆ ಎತ್ತುವದೆಂದು ಜನರ ಮನಸ್ಸಿನಲ್ಲಿ ಆಶೆ ಮೂಡಿತ್ತು."

೧೪ನೆಯ ಶತಮಾನದಲ್ಲಿ ಹಿಂದುಸ್ತಾನಕ್ಕೆ ಆಗಮಿಸಿ ಮುಸಲ್ಮಾನ ರಾಜರ ಆಳಿಕೆಯ ರೀತಿಯನ್ನು ಪ್ರತ್ಯಕ್ಷ ಕಂಡ ಮೂರಿಶ್ ಪ್ರವಾಸಿಕನಾದ ಇಬ್ನ ಬತೂತಾ(Ibna Batuta)ನು ಮುಸಲ್ಮಾನರು ಗೈಯುತ್ತಿದ್ದ ಹತ್ಯಾಕಾಂಡದ ಬಗೆಗೆ ಬರೆದ ವರ್ಣನೆ ಭಯಂಕರ

ವಿದೆ:-"ಆಗ ಮುಸಲ್ಮಾನರು ಹಿಂದುಗಳನ್ನು ಸೆರೆಹಿಡಿದು ಅಡವಿಗಳಿಗೆ ಒಯ್ದು ಅವರಿಂದ ಮರಗಳನ್ನು ಕಡಿಸುತ್ತಿದ್ದರು. ಆ ಮರಗಳನ್ನು ಹೊತ್ತುಕೊಂಡು ಹೆಂಡತಿ-ಮಕ್ಕಳೊಡನೆ ಅವರು ಕೈದಿಗಳ ಶಿಬಿರಗಳಿಗೆ ಹೋಗಬೇಕಾಗಿತ್ತು. ಮಾರನೆಯ ದಿನ ಅವರು ಹೊತ್ತುತಂದ ಮರದ ಬೊಡ್ಡೆಗಳ ಮೇಲೆಯೇ ಅವರನ್ನು ಶೂಲಕ್ಕೇರಿಸಲಾಗುತ್ತಿತ್ತು. ಬಳಿಕ ಅವರ ಹೆಂಡಂದಿರನ್ನು ಕತ್ತರಿಸಿ ಆ ಕಂಬಗಳಿಗೆ ಕೂದಲಿನಿಂದ ಕಟ್ಟಿ ನೇತುಹಾಕುತ್ತಿದ್ದರು. ತಾಯಂದಿರ ಎದೆಯ ಮೇಲೆಯೇ ಮಕ್ಕಳನ್ನು ತುಂಡು ತುಂಡು ಮಾಡಿ ಒಗೆಯುತ್ತಿದ್ದರು. ಈ ರೀತಿ ಎಲ್ಲರ ಭಯಾನಕ ಕೊಲೆ ಮಾಡಿ ಆ ಎಲ್ಲ ಹೆಣಗಳನ್ನು ಅಲ್ಲಿಯೇ ಬಿಟ್ಟು ಮುಂದಿನ ಊರಿಗೆ ಹೋಗುತ್ತಿದ್ದರು. ಅಲ್ಲಿಯೂ ಇದೇ ರೀತಿಯ ನರಹತ್ಯೆ ಭಯಾನಕ ರೀತಿಯಲ್ಲಿ ನಡೆಯುತ್ತಿತ್ತು"

ಹೀಗೆ ಕಾವ್ಯವಾಗಿಯೂ ಇತಿಹಾಸವಾಗಿಯೂ ಗಂಗಾದೇವಿಯ 'ಮಧುರಾವಿಜಯ'ವು ಜನಮನ್ನಣೆಯನ್ನು ಗಳಿಸಿದೆ.

— — —

## ಉಪನ್ಯಾಸ ಗ್ರಂಥಮಾಲೆಯು ಪ್ರಕಟನೆಗಳು

೧ ಜಾನಪದ ಕಥೆಗಳು —ಎಲ್. ಆರ್. ಹೆಗಡೆ

೨ ಜನಪದ ಕಾವ್ಯದಲ್ಲಿ ಜೀವನ ಧರ್ಮ —ಬಿ.ವ್ಹಿ.ಮಲ್ಲಾಪೂರ

೩ ಜನಪದ ಕಾವ್ಯ —ಗಿರಡ್ಡಿ ಗೋವಿಂದರಾಜ

೪ ಜನಪದ ಸಾಹಿತ್ಯದಲ್ಲಿ ಮಾತೃ ವಾತ್ಸಲ್ಯ
—ಲೀಲಾವತಿ ಬಿ. ತೋರಣಗಟ್ಟಿ

೫ ಜನಪದದಲ್ಲಿ ಮಕ್ಕಳ ಸಾಹಿತ್ಯ
—ಸಂಗಮೇಶ ಎಂ. ಬಿರಾದಾರ

೬ ಜನಪದ ಸಾಹಿತ್ಯದಲ್ಲಿ ಕಿರಿದರೊಳೆ ಪಿರಿದರ್ಥದ ಚಲಕ
— ಸಿಂಪಿ ಲಿಂಗಣ್ಣ

೭ ಜನಪದ ಸಾಹಿತ್ಯದಲ್ಲಿ ನೀತಿ —ಎಂ. ಎನ್. ವಾಲಿ

೮ ಶಿರಾಲಿಯ ಗೊಂಡರು —ನಾರಾಯಣ ಯಾಜಿ

೯ ಜನಪದ ಸಾಹಿತ್ಯದಲ್ಲಿ ಹಾಸ್ಯ —ಮೃತ್ಯುಂಜಯ ಹೊರಕೇರಿ

೧೦ ಕನ್ನಡ ಜನಪದ ಕಾವ್ಯದಲ್ಲಿ ಭಕ್ತಿಯ ನಿರೂಪಣೆ
—ಬಸವರಾಜ ಮಲಶೆಟ್ಟಿ

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩